

# ಸಿದ್ಧಗಂಗಾ

ಸೆಪ್ಟೆಂಬರ್ ೧೯೯೮



90 ವರ್ಷ ತುಂಬಿದ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಸೆಪ್ಟೆಂಬರ್ 13 ರಂದು ಮೈಸೂರಿನ ಕಲಾ ಮಂದಿರದಲ್ಲಿ ನಡೆದ ಸನ್ಮಾನ ಸಮಾರಂಭವನ್ನು ಕೇಂದ್ರ ರಕ್ಷಣಾ ಸಚಿವ ಶ್ರೀ ಜಾರ್ಜ್ ಫರ್ನಾಂಡೀಸ್ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಉಪ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೪ ಸೆಪ್ಟೆಂಬರ್ ೧೯೯೮ ಸಂಚಿಕೆ : ೯

## ಒಳಪುಟಗಳಲ್ಲಿ ......




ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೮೭


ಲೇಖಕರ ಅಭಿಪ್ರಾಯಗಳು ಶ್ರೀ ಮಠದ ಅಭಿಪ್ರಾಯಗಳಲ್ಲ

| ವಿಳಾಸ : | ಚಂದಾ ವಿವರ : |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ಜಿಲ್ಲೆ-೫೭೨ ೧೦೪ | ವಾರ್ಷಿಕ ಚಂದಾ ರೂ. ೫೦.<br>ಆಜೀವ ಸದಸ್ಯತ್ವ ರೂ. ೫೦೦.<br>ಬಿಡಿ ಪ್ರತಿ ರೂ. ೫.೦೦ |

ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.



## ಸಂಪಾದಕೀಯ....

ಗ್ರಾಮೀಣ ಪರಿಸರದಲ್ಲಿ ಪ್ರಾಥಮಿಕ ಶಾಲೆಯ ಮೊದಲ ತರಗತಿಯಿಂದ ಹತ್ತನೇ ತರಗತಿಯವರೆಗೆ ಅಭ್ಯಾಸ ಮಾಡಿದ ವಿದ್ಯಾರ್ಥಿ- ವಿದ್ಯಾರ್ಥಿನಿಯರಿಗೆ ಸರ್ಕಾರ ಮುಂದಿನ ವಿದ್ಯಾಭ್ಯಾಸದ ಪ್ರವೇಶಕ್ಕಾಗಿ, ಉದ್ಯೋಗಕ್ಕಾಗಿ ಹತ್ತು ಅಂಕಗಳ ಕೃಪಾದಾನ ಮಾಡಿರುವುದು ನಿಜಕ್ಕೂ ಸಂತೋಷದಾಯಕವಾದುದು. ಈ ಮಧ್ಯೆ ನಗರ ಪರಿಸರದಲ್ಲಿ ಅಭ್ಯಾಸ ಮಾಡಿರುವ ವಿದ್ಯಾರ್ಥಿಗಳು ಅಪಸ್ವರವೆತ್ತಿರುವುದೂ ಉಂಟು. ಆದರೆ ಗ್ರಾಮ ಜೀವನದ ವಾಸ್ತವವನ್ನರಿಯದ ನಗರ ವಾಸಿಗಳು ತಮಗೆ ಅನ್ಯಾಯವಾಗುತ್ತಿದೆ ಎನ್ನುವುದು ಸಹಜವೆನ್ನಬಹುದಾದರೂ, ಹಳ್ಳಿಮಕ್ಕಳ ಅಭ್ಯಾಸಕ್ಕಿರುವ ಸೌಲಭ್ಯಗಳ ಅಭಾವವನ್ನರಿತಾಗ ಸತ್ಯ ಕಾಣಬಂದೀತು.

ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಮಠದಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಎದುರಾಗಿರುವ ಸಮಸ್ಯೆ ಬೃಹತ್ತಾಗಿದೆ. ಶ್ರೀಮಠ ಗ್ರಾಮೀಣ ವಿದ್ಯಾರ್ಥಿಗಳ ಕಲ್ಯಾಣದಲ್ಲಿ ನಿರತವಾಗಿರುವ ಸೇವಾಸಂಸ್ಥೆ. ಇಲ್ಲಿ ಕಲಿಯುತ್ತಿರುವ ಐದು ಸಾವಿರ ಮಕ್ಕಳು ಕರ್ನಾಟಕದ ಎಲ್ಲ ಜಿಲ್ಲೆಗಳ ಹಳ್ಳಿಗಳಿಂದ ಬಂದಿದ್ದಾರೆ. ಬೀದರ್, ಬಿಜಾಪುರ, ಬಳ್ಳಾರಿ, ಗುಲ್ಬರ್ಗಾ, ಚಿತ್ರದುರ್ಗ, ಧಾರವಾಡ, ಚಿಕ್ಕಮಗಳೂರು, ಹಾಸನ, ಬೆಂಗಳೂರು, ತುಮಕೂರು, ಮೈಸೂರು ಜಿಲ್ಲೆಗಳಿಂದ ಎಲ್ಲ ಜಾತಿ ಮತಗಳಿಗೆ ಸೇರಿದ ದೀನ ದಲಿತ ಅನಾಥ, ದುರ್ಬಲ, ಹಿಂದುಳಿದ, ಅಲ್ಪ ಸಂಖ್ಯಾತ ಸಮಾಜದ ಮಕ್ಕಳಿದ್ದಾರೆ. ದಿನಕ್ಕೆ ಎರಡು ಹೊತ್ತು ಊಟಕ್ಕೂ ಚಿಂತಿಸುವ ಸ್ಥಿತಿಯ ಕುಟುಂಬಗಳಿಂದ ಬಂದಿದ್ದಾರೆ. ಈ ಮಕ್ಕಳಲ್ಲಿ ಪೂಜ್ಯ ಶ್ರೀಗಳವರೇ ಅನೇಕರಿಗೆ ಬಟ್ಟೆ, ಶಾಲಾ ಕಾಲೇಜುಗಳ ಶುಲ್ಕಗಳನ್ನೂ ಭರಿಸುತ್ತಿದ್ದಾರೆ. ಇಂಥ ಮಕ್ಕಳು ತಮ್ಮ ಭವಿಷ್ಯದಲ್ಲಿ ಬೆಳಕು ಕಂಡೇವು ಎಂಬ ಆಶಾ ಭಾವನೆಯಿಂದ ಮುನ್ನಡೆದಿದ್ದಾರೆ.

ಆದರೆ, ಸರ್ಕಾರ ಹೊರಡಿಸಿರುವ ಗ್ರಾಮೀಣ ವಿದ್ಯಾರ್ಥಿಗಳಿಗೆ ವರವಾಗಿರುವ ಕೃಪಾಂಕ ಇವರಿಗೆ ಅನ್ವಯವಾಗುವುದಿಲ್ಲವೆನ್ನುವ ತಾಂತ್ರಿಕ ತೊಡಕನ್ನು ಸಂಬಂಧಿಸಿದ ಅಧಿಕಾರಿಗಳು ಎತ್ತಿದ್ದಾರೆ. ಶ್ರೀ ಸಿದ್ಧಗಂಗಾ ಮಠ ನಗರ ಪ್ರದೇಶಕ್ಕೆ ಸೇರಿರುವುದರಿಂದ ಕೃಪಾಂಕ ಸೌಲಭ್ಯ ಶ್ರೀಮಠದಲ್ಲಿ ವ್ಯಾಸಂಗಿಸುವ ವಿದ್ಯಾರ್ಥಿಗಳಿಗೆ ಅನ್ವಯವಾಗುವುದಿಲ್ಲ ಎನ್ನುತ್ತಾರೆ. ಪೂಜ್ಯ ಶ್ರೀಗಳು ಈ ಬಗ್ಗೆ ಸಂಬಂಧಿಸಿದವರೊಂದಿಗೆ ಪತ್ರ ವ್ಯವಹಾರ ನಡೆಸಿದ್ದಾರೆ. ಈಗಾಗಿರುವುದರಿಂದ ದುಗುಡಗೊಂಡಿದ್ದಾರೆ. ಶ್ರೀಮಠ ನಗರವ್ಯಾಪ್ತಿಗೆ ಒಳಗಾಗಿದೆ. ಆದರೆ, ಮಠದಲ್ಲಿ ಓದುತ್ತಿರುವ ಮಕ್ಕಳು ಗುಡಿಸಲು, ಜೋಪಡಿವಾಸಿಗಳಾದ ಗ್ರಾಮೀಣ ಪ್ರದೇಶದಿಂದ ಬಂದವರೆಂಬುದನ್ನು ಮಾನವೀಯ ದೃಷ್ಟಿಯಿಂದ, ಸರ್ಕಾರ ಮತ್ತು ಅಧಿಕಾರಿ ಬಂಧುಗಳು ಪುನರ್‌ಪರಿಶೀಲಿಸ ಬೇಕೆಂದು, ಶಾಸಕರು, ಲೋಕಸಭಾಸದಸ್ಯರು, ಸರ್ವಸಮಾಜಗಳ ಮುಖಂಡರು ಈ ಸನ್ನಿವೇಶದಲ್ಲಿ ಸಕ್ರಿಯವಾಗಿ ಗಮನ ಹರಿಸುವಂತೆ ಪ್ರಯತ್ನಿಸಬೇಕೆಂದು 'ಸಿದ್ಧಗಂಗಾ' ಪ್ರಾರ್ಥಿಸುವುದಲ್ಲದೆ, ಶ್ರೀಮಠದ ವಿದ್ಯಾರ್ಥಿಗಳಿಗೂ ಕೃಪಾಂಕ ಸೌಲಭ್ಯ ಲಭ್ಯವಾಗಲಿ ಎಂದು ಹಾರೈಸುತ್ತದೆ.

-- **ಸಂಪಾದಕ**





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಶಿ ಕಾರುಣ್ಯವೆ ದಯೆಯ ಧರ್ಮಸ್ಥಳವೆ
ವರತೀರ್ಥಕಾಂಚಿ ಕೇದಾರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಪ್ರೀತಿಯುರಿಲಿಂಗವೆ ಮಮತೆಯ ಮಹಕೂಟವೆ
ಭ್ರಾತೃಭಾವದ ಶಿವಶಿಖರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಲ್ಯಾಣದ ಸಿರಿಬೆಳೆಯ ಸೊಂಪು ಸೊನ್ನಲಿಗೆಯೆ
ಸಾರಕೂಡಲಸಂಗಮಂಗಳವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಪುಣ್ಯ ಶ್ರೀ ಚಿತ್ತವೆ ಧನ್ಯ ಶ್ರೀ ಕಾಯವೆ
ಅನ್ಯವನರಿಯದ ಶ್ರೀ ಶುಭವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಪಾವನಕೆ ಪಾವನವೆ ನಿರ್ಮಲಕೆ ನಿರ್ಮಲವೆ
ಭಾವ ಶುದ್ಧಿಯ ಭವ್ಯ ತೀರ್ಥವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ನಗೆಮಲ್ಲಿಗೆಯು ನೀನೆ ಸಿರಿಸಂಪಿಗೆಯು ನೀನೆ
ಶಿವಲಿಂಗ ಸಿರಿಪುಷ್ಪ ನೀನಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಧರೆ ಧರಿಸಿದ ಪುಣ್ಯವೆ ನಭ ಹರಸಿದ ಭಾಗ್ಯವೆ
ಯುಗಕಂಡ ಪರಮ ಪಾವನವೇ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕುಡಿದ ತಾಯಿಯ ಹಾಲು ತೊರೆಯಾಗಿ ಹರಿದಂತೆ
ಬಿಡದೆ ನೀ ಕುಡಿಸಿದೆ ಮಗು ಜಗಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ತನುವತೋಂಟವ ಮಾಡಿ ಮನವ ಮಡಿಯಾಗಿಸಿದೆ
ಅನುದಿನವು ಜಗಕ್ಕಾಗಿ ನೀ ದುಡಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಶೀಲ ಶಿವಶುಭ್ರವೆ ನೀತಿ ನೀಲಾಂಜನವೆ
ವೀರ ವೈರಾಗ್ಯದ ಗಿರಿಮೇರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

### ಮಲಗುವ ಮುನ್ನ

'ಮನುಷ್ಯ ಒಳಿತು ಕೆಡುಕಗಳ ಮಿಶ್ರಣ' ಎಂಬ ಮಾತೊಂದಿದೆ. ಆ ಒಳಿತು ಕೆಡುಕುಗಳು ವ್ಯಕ್ತವಾಗುವುದು ಆಡುವ ಮಾತಿನ ಮೂಲಕ, ಮಾಡುವ ಕೆಲಸದ ಮೂಲಕ, ಚಿಂತಿಸುವ ಚಿಂತನೆಗಳ ಮೂಲಕ. ದೈನಂದಿನ ಜೀವನದಲ್ಲಿ ದಿನದ ಉದಯದಿಂದ ಅಸ್ತಮಾನದವರೆಗೆ ಒಂದಲ್ಲ ಒಂದು ಲೋಕವ್ಯವಹಾರದಲ್ಲಿ ನಾವೆಲ್ಲರೂ ವ್ಯವಹರಿಸುವುದು ಅನಿವಾರ್ಯ. ಮಾತಾಡುವುದು, ಕರ್ತವ್ಯಮುಖಿಗಳಾಗುವುದು ಸ್ವಾಭಾವಿಕ. ಮೈ, ಮನಸ್ಸು, ಮಾತುಗಳ ಸಹಕಾರದಿಂದ ಜೀವಿಸುತ್ತೇವೆ. ದಿನದ ಕೊನೆಯಲ್ಲಿ ಮಲಗುತ್ತೇವೆ. ದಣಿದ ಮೈ, ಮನಗಳು ವಿರಾಮವನ್ನು, ವಿಶ್ರಾಂತಿಯನ್ನು ಬಯಸುವುದು ಸಹಜ. ಅಂತಹ ಸಂದರ್ಭದಲ್ಲಿ - ಮಲಗುವ ಮೊದಲು ನಮ್ಮನ್ನು ನಾವೇ ವಿಮರ್ಶಿಸಿಕೊಳ್ಳುವುದು ಒಳ್ಳೆಯದು. ಇಂದು, ನಾನು ಆಡಿದ ಮಾತುಗಳಲ್ಲಿ ಒಳ್ಳೆಯವು ಎಷ್ಟು-ಕೆಟ್ಟದಾದುವು ಎಷ್ಟು, ನಾನು ಮಾಡಿದ ಕೆಲಸಗಳಲ್ಲಿ ಒಳ್ಳೆಯವುಗಳ ಸಂಖ್ಯೆ ಹೆಚ್ಚೋ-ಕೆಟ್ಟವುಗಳ ಸಂಖ್ಯೆ ಹೆಚ್ಚೋ, ನಾನು ಚಿಂತಿಸುವ ಚಿಂತನೆಗಳಲ್ಲಿ ಒಳಿತು-ಕೆಡುಕುಗಳ ಪ್ರಮಾಣ ಹೇಗೆ ಎಂಬ ಲೆಕ್ಕಾಚಾರ ಮಾಡಿಕೊಳ್ಳುವುದು ಆರೋಗ್ಯಕರ ಬೆಳವಣಿಗೆ. ಗಳಿಸಿದ ಹಣದ ಲೆಕ್ಕಾಚಾರದಂತೆ, ವ್ಯಯಿಸಿದ ಹಣದ ಲೆಕ್ಕವಿಡುವಂತೆ ಪಾಪ-ಪುಣ್ಯಗಳ ಜಮಾ-ಖರ್ಚಿನ 'ಆಡಿಟ್' ಮಾಡಿಕೊಳ್ಳುವುದು ಒಳ್ಳೆಯದು. ಬಸವಣ್ಣನವರು ಹೇಳುವಂತೆ "ಕಾಣಿಯ ಸೋಲದ, ಅರ್ಧಗಾಣೆಯ ಗೆಲ್ಲದ" ಸದಾಚಾರ ನಮ್ಮದಾಗಬೇಕು. ಪುರಂದರ ದಾಸರು ಹೇಳುವ ಹಾಗೆ 'ಮಲಗುವ ಮುನ್ನ ಮನವ ಶೋಧಿಸಬೇಕು' ನಿಚ್ಚ, ದಿನ ದಿನವೂ ಮಾಡುವ ಪಾಪ-ಪುಣ್ಯದ ವೆಚ್ಚ. ದಿನದ ಲೆಕ್ಕಾಚಾರ ಚುಕ್ತಮಾಡಿ ಕೆಡುಕು ಕಡಿಮೆ, ಒಳಿತು ಅಧಿಕವಾಗುವಂತೆ ತನ್ನ ದೇವವನ್ನು ಪ್ರಾರ್ಥಿಸಿ, ನಿದ್ದೆ ನೆಮ್ಮದಿಯನ್ನು ಸಾಧಿಸುವುದು ನಮ್ಮ ಪರಿಪಾಠವಾಗಬೇಕು.

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಕಬ್ಬಿನ ಹೊರಗಣ ಸೋಗೆಯ ಮೆದ್ದು ಪರಿಣಾಮಿಸುವ ಪಶುವಿನಂತೆ
ಹೊರವೇಷವ ಹಲ್ಲಣಿಸಿಕೊಂಡು
ಈಶ್ವರರೋವಾಚದ ನುಡಿಯ ನುಡಿದು
ಬಲ್ಲವರೆನಿಸಿಕೊಳ್ಳಬಹುದಲ್ಲದೆ
ಈಶ್ವರನ ನಿಲವ ಈ ಉಪಚಾರದಲ್ಲಿ ಕಾಣಬಹುದೆ?
ಕಾಣಬಾರದು ಕಾಣೆರಯ್ಯಾ
ಕಬ್ಬ ಕಡಿದು ಒಳಗಣ ಮಧುರವ ಸ್ವೀಕರಿಸುವ ಮದಗಜದಂತೆ
ಅಂತರಂಗದ ನಿಳಯದಲ್ಲಿ ನಿಜವ ಕಂಡು ನಿವಾಸಿಗಳಾಗಿ
ಚಿದಂಗ ಚಿತ್ಪ್ರಾಣ ಚಿಚ್ಛಕ್ತಿ ಚಿದಾಕಾಶವೆನಿಸುವ
ಚಿದ್ಬ್ರಹ್ಮೇ ಸ್ಥಲಕುಲವೆಂದರಿದು ಸುಳಿಯ ಬಲ್ಲರೆ ಸ್ಥಲಜ್ಞರೆಂಬೆ
ಉಳಿದವರೆಲ್ಲಾ ಹುಸಿಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಶಿವತತ್ವದ ರಹಸ್ಯವನ್ನು ತಿಳಿಯದೆ ಕೇವಲ ತತ್ವವನ್ನು ಬಾಯಿಂದ ನುಡಿಯುತ್ತ ಹೋಗುವವರೆಗೆ ಶಿವತತ್ವ ಸುಖಾನುಭವ ಸುಖವು ಎಂದಿಗೂ ಸಾಧ್ಯವಿಲ್ಲ. ಕೇವಲ ಹೊರಗೆ ಶಿವಲಾಂಛನವನ್ನು ತೊಟ್ಟುಕೊಂಡು ಬಾಯಿಮಾತುಗಳನ್ನು ಸುರಿಸುವವರು ಕಬ್ಬಿನ ಹೊರಗಿನ ಎಲೆಗಳನ್ನೇ ತಿಂದು ಸಂತೋಷಪಡುವ ಪಶುಗಳಂತಾಗುವರು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ.
ಸೇ. ಸಂಘ, ಎಡೆಯೂರು-ಗದಗ)

## ಗುರುವಂದನ



ಭೂಮ್ಯಾಂ ಭಕ್ತ ಜನಾವನಾಯ ಭಗವದ್ ಸಂದೇಶ ಸಂದೀಪರಾಃ ।
ಶ್ರೀಮದ್‌ಧರ್ಮ ಸುರಕ್ಷಣಾರ್ಥ ಮವನೀ ಪೀತಾಂಬರೇ ಭಾಸ್ಕರಾಃ।
ಸ್ವಾನುಷ್ಠಾನ ವಿಶೇಷ ಪುಣ್ಯವಿಲಸತ್ ಶುಭ್ರಾಂಶು ದಿವ್ಯಪ್ರಭಾಃ ।
ವೇದಾಂತಾದಿ ಸಮಸ್ತಶಾಸ್ತ್ರ ಕಥನೇ ಶ್ರೀವ್ಯಾಸರೂಪೋಪಮಾಃ ।

ಯೇ ನಿತ್ಯಂ ವರಚಂದ್ರಮೌಳಿ ಭಜನಂ ಭಕ್ತ್ಯಾದೃಢಂ ಕುರ್ವತೆ ।
ಯೇ ನಿತ್ಯಂ ನಿಜಶಿಷ್ಯ ವೃಂದ ಕುಮುದ ವ್ರಾತೇಷು ಚಂದ್ರೋಪಮಾಃ।
ಯೇ ನಿತ್ಯಂ ದುರಿತಾದ್ರಿ ಭೇದನ ವಿಧೌ ಶ್ರೀ ವಜ್ರಶಕ್ರೋ ಪಮಾಃ।
ತಾನ್ ವಂದೇ ನವಭಾರತೀ ಗುರುವರಾನ್ ಪ್ರೋದ್ದಂಡ ತೇಜೋವರಾನ್।

ಯದ್‌ವಕ್ತ್ರಾಂ-ಭುಜವರ್ತಿನೀ ಭಗವತೀ ಸ್ಮೇರಾನನಾಭಾರತೀ ।
ಯನ್ನೇತ್ರಸ್ಥ ದಿವಾಕರೋ ತ್ರಿಭುವನೇ ಭಾಭಾತಿ ಕೀರ್ತಿಂಬ್ರುವನ್ ।
ಯತ್ ಕಾರುಣ್ಯಪರಂ ಪರಾಂ ಸುರನದೀತೋಯಂ ತರಂಗೈರ್ದಿಳನ್।
ತಾನ್ ವಂದೇ ಹರಿಪಾದ ಪಂಕಜಧರಾನ್ ಪ್ರೋದ್ದಂಡ ವಿದ್ಯಾಗುರೂನ್।

ಧರ್ಮಜ್ಞಾನ ವಿವೇಕಶೂನ್ಯ ಮನುಜಾನ್ ದೃಷ್ಟ್ವಾಹರಿರ್ಧರ್ಮರಾಟ್।
ಸ್ವಾತ್ಮಜ್ಞಾನ ನಿಬೋಧನಾಯ ಕುಮತಧ್ವಾಂತೈಕ ಸೂರ್ಯಪ್ರಭಂ ।
ಶ್ರೀಮತ್ ಶಂಕರ ದೇಶಿಕಂ ವರಯತಿಂ ಸಂಪ್ರೇಕ್ಷಯಾಮಾಸಚ ।
ತತ್ವಜ್ಞಾನ ಮಿದಂಹಿಯೇನ ರಚಿತಂ ತಸ್ಮೈ ನಮೋ ಯೋಗಿನೇ ।

ವಿಘ್ನಂ ನಿವಾರಯತಿಯೋ ಕರುಣಾ ಪ್ರಪೂಣಃ ।
ಸಿದ್ಧಿಂ ಪ್ರದಾತಿ ನಿಜಭಕ್ತಗಣೇಭ್ಯ : ಏವ ।
ಭಕ್ತ್ಯಾಚ ಯೋ ಜಪತಿತಂ ಸಕೃದೇವ ಮರ್ತ್ಯಃ ।
ಮುಕ್ತಿಂ ಪ್ರಯಾತಿ ಮತಿಮಾನ್ ಸಹಿ ವಿಘ್ನ-ಪಾಶಾತ್ ।

**- ರೋಹಿಣಿ ಮಹಾಸ್ವಾಮಿ**
ಬೆಂಗಳೂರು ದೂರದರ್ಶನ ಕೇಂದ್ರ
ಬೆಂಗಳೂರು







# ಶ್ರೇಷ್ಠ ಶಿಕ್ಷಣತಜ್ಞ, ದಕ್ಷ ಆಡಳಿತಗಾರ
# ಡಾ. ಸರ್ವಪಲ್ಲಿ ರಾಧಾಕೃಷ್ಣನ್

- ಎಚ್.ಎಸ್. ಸಿದ್ಧಗಂಗಪ್ಪ

*ಪ್ರತಿವರ್ಷ ಸೆಪ್ಟೆಂಬರ್ ೫ರಂದು ಶಿಕ್ಷಕರ ದಿನಾಚರಣೆಯನ್ನು ಆಚರಿಸುವುದರ ಮೂಲಕ ಖ್ಯಾತ ಶಿಕ್ಷಣತಜ್ಞ, ಅಂತರರಾಷ್ಟ್ರೀಯ ಖ್ಯಾತಿಯ ತತ್ವಜ್ಞಾನಿ, ದಕ್ಷ ಆಡಳಿತಗಾರ, ಮಾಜಿ ರಾಷ್ಟ್ರಪತಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರವರನ್ನು ಸ್ಮರಿಸಿಕೊಳ್ಳುತ್ತಿದ್ದೇವೆ. ಅವರೊಬ್ಬ ಆದರ್ಶ ಶಿಕ್ಷಕರಾಗಿದ್ದರಲ್ಲದೆ ಶಿಕ್ಷಕರ ಬಗ್ಗೆ ಅಪಾರವಾದ ಗೌರವವನ್ನಿಟ್ಟುಕೊಂಡಿದ್ದರು. ಅವರು ತಮ್ಮ ಜೀವನದಲ್ಲಿ ಏರಿದ ಸಾಧನೆಯ ಮೆಟ್ಟಿಲುಗಳು, ಆದರ್ಶ ಸಿದ್ಧಾಂತಗಳು ಶಿಕ್ಷಕ ಸಮುದಾಯಕ್ಕೆ ದಾರಿದೀಪ. ಇಂತಹ ಚೇತನವನ್ನು ನೆನಪು ಮಾಡಿಕೊಳ್ಳುವುದು ನಮ್ಮ ಕರ್ತವ್ಯವೂ ಹೌದು!*

'ಭಾರತದಂತಹ ಮಹಾನ್ ಜನತಂತ್ರವಾದಿ ರಾಷ್ಟ್ರಕ್ಕೆ ಡಾ. ರಾಧಾಕೃಷ್ಣನ್‌ರವರು ಅಧ್ಯಕ್ಷರಾದುದು ತತ್ವಜ್ಞಾನಕ್ಕೆ ಸಂದ ಗೌರವವಾಗಿದೆ. ನನಗಂತೂ ಇದೊಂದು ವಿಶೇಷ ಸಂತಸದ ವಿಶಿಷ್ಟ ಸಂದರ್ಭ. ತತ್ವಜ್ಞಾನಿಗಳು ರಾಜರಾಗಬೇಕೆಂದು ಪ್ಲೇಟೋ ಹಂಬಲಿಸಿದ. ಒಬ್ಬ ತತ್ವಜ್ಞಾನಿಯನ್ನು ತನ್ನ ಅಧ್ಯಕ್ಷರನ್ನಾಗಿ ಸ್ವೀಕರಿಸುವುದರ ಮೂಲಕ ಭಾರತ ಶ್ರೇಷ್ಠ ಗೌರವದ ಶ್ರೇಯಸ್ಸನ್ನು ಸಂಪಾದಿಸಿಕೊಂಡಿದೆ". ೧೯೬೨ರಲ್ಲಿ ಭಾರತದ ಅತ್ಯುನ್ನತ ಸ್ಥಾನವಾದ ರಾಷ್ಟ್ರಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ವಿಶ್ವವಿಖ್ಯಾತ ಶಾಂತಿವಾದಿ ಬರ್ಟ್ರಂಡ್ ರಸೆಲ್ ಅವರು ಹೃದಯ ತುಂಬಿ ಹೇಳಿದ ಈ ಮಾತುಗಳು ಡಾ. ರಾಧಾಕೃಷ್ಣನ್ ಅವರ ವ್ಯಕ್ತಿತ್ವಕ್ಕೆ ಸಂದ ಗೌರವ.

ಮದ್ರಾಸ್ ಪ್ರಾಂತ್ಯದ ತಿರುತ್ತಣಿಯ ಸಂಪ್ರದಾಯಸ್ಥ ಮನೆತನದಲ್ಲಿ ೧೮೮೮ರ ಸೆಪ್ಟಂಬರ್ ೫ರಂದು ರಾಧಾಕೃಷ್ಣನ್‌ರವರು ಜನಿಸಿದರು. ತಂದೆ ವೀರಸ್ವಾಮಿ, ತಾಯಿ ಸೀತಮ್ಮ. ವೀರಸ್ವಾಮಿ ಅವರಿಗೆ ತಹಸೀಲ್ದಾರ್ ಕಛೇರಿಯಲ್ಲಿ ಉದ್ಯೋಗ. ಬರುತ್ತಿದ್ದ ಅಲ್ಪ ವೇತನದಲ್ಲಿ ತುಂಬು ಸಂಸಾರವನ್ನು ನಡೆಸಬೇಕಾದ ಪರಿಸ್ಥಿತಿ.

### ಶಿಕ್ಷಣ

ಪ್ರೌಢಶಿಕ್ಷಣ ಮುಗಿಸುವವರೆಗೂ ರಾಧಾಕೃಷ್ಣನ್ ಅವರು ಹೇಳಿಕೊಳ್ಳುವಷ್ಟು ಪ್ರತಿಭಾವಂತ ವಿದ್ಯಾರ್ಥಿಯಾಗಿರಲಿಲ್ಲ. ಸಾಮಾನ್ಯ ವಿದ್ಯಾರ್ಥಿಯಾಗಿದರೂ ಯಾವ ತರಗತಿಯಲ್ಲೂ ಅನುತ್ತೀರ್ಣರಾಗಲಿಲ್ಲ. ಒಂಟಿತನ ಅವರಿಗೆ ಪ್ರಿಯವಾಗಿತ್ತು. ಸಹಪಾಠಿಗಳೊಡನೆ ಬೆರೆಯುತ್ತಿರಲಿಲ್ಲ. ತಂದೆ ವೀರಸ್ವಾಮಿಗೆ ಸದಾ ಮಗನ ಭವಿಷ್ಯದ ಚಿಂತೆ. ಸ್ಥಳ ಬದಲಾವಣೆಯಾದರೆ ಮಗ ಬದಲಾಯಿಸಬಹುದೆಂದು ಭಾವಿಸಿ ವೆಲ್ಲೂರಿನ ವೋಲ್ಹೀನ್ ಕಾಲೇಜಿಗೆ ಸೇರಿಸಿದರು. ಅವರ ಊಹೆ ನಿಜವಾಯಿತು. ಸದಾ ಒಂಟಿಯಾಗಿರುತ್ತಿದ್ದವರು ಸಹಪಾಠಿಗಳೊಡನೆ ಬೆರೆತರು. ವಿದ್ಯಾಭ್ಯಾಸದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡರು. ಮೊದಲ ವರ್ಷದ ಫಲಿತಾಂಶ ಅವರಿಗೆ ವಿದ್ಯಾರ್ಥಿ ವೇತನವನ್ನು ತಂದು ಕೊಟ್ಟಿತು.

ಮದ್ರಾಸ್ ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಪ್ರವೇಶ ಪಡೆದರು. ಆಗ ಅವರಿಗೆ ೧೫ ವರ್ಷ. ಅದೇ ವರ್ಷ ಹಿರಿಯರ ಆದೇಶದಂತೆ ಗೃಹಸ್ಥಾಶ್ರಮ ಸ್ವೀಕರಿಸಿದರು. ಕೈಹಿಡಿದ ಭಾಗ್ಯವಂತೆ ಶ್ರೀಮತಿ ಶಿವಕಾಮು ಅಮ್ಮ. ಆಗ ಆಕೆಗೆ ೧೦ ವರ್ಷ.

ಅವರ ವಿದ್ಯಾರ್ಥಿ ಜೀವನ ಹೇಳಿಕೊಳ್ಳುವಷ್ಟು ಸುಗಮವಾಗಿ ನಡೆಯಲಿಲ್ಲ. ಅವರಲ್ಲಿ ಮನೆ ಮಾಡಿಕೊಂಡಿದ್ದ ಏಕಾಗ್ರತೆ, ಓದಲೇಬೇಕೆಂಬ ಉತ್ಕಟವಾದ ಬಯಕೆಯ ಮುಂದೆ ಕಿತ್ತುತಿನ್ನುವ ಬಡತನ ವೈವಾಹಿಕ ಜೀವನ ಎಂದೂ ಅವರ

ಓದಿಗೆ ಅಡ್ಡ ಬರಲಿಲ್ಲ. ಕಿರಿಯ ವಿದ್ಯಾರ್ಥಿಗಳಿಗೆ ಮನೆ ಪಾಠ ಹೇಳಿ; ಬಂದ ಹಣದಿಂದ ಫೀಜು ಕಟ್ಟಿದರು. ಪುಸ್ತಕ ಕೊಂಡು ಓದಿದರು. ಜ್ಞಾನದ ಹಸಿವಿನ ಮುಂದೆ ಹೊಟ್ಟೆ ಹಸಿವು ಗೌಣವಾಯಿತು. ಕಷ್ಟಪಟ್ಟು ಓದಿ ತತ್ವಶಾಸ್ತ್ರದಲ್ಲಿ ಉನ್ನತ ಶ್ರೇಣಿಯಲ್ಲಿ ಪದವಿಯನ್ನು ಪಡೆದರು.

***ಉದ್ಯೋಗ***

ರಾಧಾಕೃಷ್ಣನ್‌ರವರು ತಮ್ಮ ಅಪಾರವಾದ ಶ್ರದ್ಧೆ, ಪರಿಶ್ರಮದಿಂದ ಸಾಧನೆಯ ಮೆಟ್ಟಿಲುಗಳನ್ನು ಏರುತ್ತಾ ಹೋದರು. ಅವರ ವಿಚಾರಧಾರೆ; ವೇದಾಂತದ ಬಗ್ಗೆ ಆಳವಾದ ಅಧ್ಯಯನ, ಇಂಗ್ಲೀಷ್ ಭಾಷೆಯ ಮೇಲಿನ ಪ್ರಭುತ್ವವನ್ನು ಅರಿತ ಕಾಲೇಜಿನ ಆಡಳಿತವರ್ಗ; ಅವರು ಕಲಿತ ಕಾಲೇಜಿನಲ್ಲೇ ಶಿಕ್ಷಕರನ್ನಾಗಿ ನೇಮಿಸಿಕೊಂಡಿತು. ಅವರು ತಮ್ಮ ಅಗಾಧವಾದ ವಿದ್ವತ್ತಿನಿಂದ ಬಹುಬೇಗ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದರು. ತತ್ವಜ್ಞಾನದಂಥ ಕಷ್ಟವಾದ ವಿಷಯವನ್ನು ಸರಳಗೊಳಿಸಿ ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ವಿವರಿಸುತ್ತಿದ್ದರು. ಅವರ ತರಗತಿಗಳೆಂದರೆ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚು.

ತಮ್ಮ ಬಿಡುವಿನ ವೇಳೆಯನ್ನು ಅಧ್ಯಯನಕ್ಕೆ ಮೀಸಲಾಗಿಟ್ಟರು. ಅವರ ನಿರಂತರ ಅಧ್ಯಯನ ಅವರೊಬ್ಬ ಶ್ರೇಷ್ಠ ತತ್ವಜ್ಞಾನಿಯಾಗಲು ಪ್ರೇರಕವಾಯಿತು. ವಿಶ್ವಕವಿ ರವೀಂದ್ರನಾಥ ಟ್ಯಾಗೂರರ ಕೃತಿಗಳನ್ನೆಲ್ಲ ಅಧ್ಯಯನ ಮಾಡಿ ಗ್ರಂಥ ರಚನೆ ಮಾಡಿದರು. ಅವರು ಬರೆದ ಗ್ರಂಥಗಳು ರವೀಂದ್ರನಾಥ ಟ್ಯಾಗೂರರನ್ನು ಆಕರ್ಷಿಸಿತು.

***ಸಹೃದಯಿ***

ರಾಧಾಕೃಷ್ಣನ್‌ರವರು ಆದರ್ಶ ಶಿಕ್ಷಕ ಮಾತ್ರವಲ್ಲ; ಸಹೃದಯಿ ವ್ಯಕ್ತಿಯೂ ಆಗಿದ್ದರು. ವಿದ್ಯಾರ್ಥಿಗಳ ಬಗ್ಗೆ ಅನನ್ಯ ಪ್ರೀತಿ ವಿಶ್ವಾಸವನ್ನಿಟ್ಟುಕೊಂಡಿದ್ದ ಅವರು ಎಷ್ಟೋ ಸಲ ಕಷ್ಟದಲ್ಲಿರುವ ವಿದ್ಯಾರ್ಥಿಗಳಿಗೆ ಆರ್ಥಿಕ ನೆರವು ನೀಡಿ ಕಮರಿ ಹೋಗುತ್ತಿದ್ದ ಅವರ ಭವಿಷ್ಯವನ್ನು ರೂಪಿಸಿದ ತೃಪ್ತಿ ಅವರದು.

***ಆದರ್ಶ ಶಿಕ್ಷಕ***

೧೯೧೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭವಾದಾಗ ರಾಧಾಕೃಷ್ಣನ್‌ರವರ ವಿದ್ವತ್ತು, ವಿಚಾರಧಾರೆ, ಆಕರ್ಷಕ ಶೈಲಿ ಇವುಗಳನ್ನು ಮನಗಂಡ ವಿಶ್ವವಿದ್ಯಾನಿಲಯದ ಆಡಳಿತ ವರ್ಗ ಅವರನ್ನು ತತ್ವಜ್ಞಾನದ ಉಪನ್ಯಾಸಕರಾಗಿ ಬರುವಂತೆ ಆಹ್ವಾನಿಸಿತು. ಆಹ್ವಾನವನ್ನು ಮನ್ನಿಸಿ ಮೈಸೂರಿಗೆ ಬಂದರು. ಅಲ್ಪಕಾಲದಲ್ಲಿಯೇ ತಮ್ಮ ಮಾತಿನ ಮೋಡಿಯಿಂದ ವಿದ್ಯಾರ್ಥಿಗಳ ಮನಸ್ಸನ್ನು ಅಚ್ಚುಮೆಚ್ಚಿನ ಗುರುಗಳಾದರು.

ರಾಧಾಕೃಷ್ಣನ್‌ರವರು ರವೀಂದ್ರರ ಬಗ್ಗೆ ಬರೆದ ಗ್ರಂಥ, ಕಲ್ಕತ್ತ ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿದ್ದ ಅಶುತೋಷ್ ಮುಖರ್ಜಿಯವರ ಮನಸೆಳೆಯಿತು. ಅವರು ಬರೆದ ಲೇಖನಗಳನ್ನೆಲ್ಲ ಓದಿ ಅವರ ಪಾಂಡಿತ್ಯಕ್ಕೆ ಸಂತೋಷಪಟ್ಟರು. ಇಂಥ ಪ್ರತಿಭಾನ್ವಿತ ಶಿಕ್ಷಕರು ನಮ್ಮ ವಿಶ್ವವಿದ್ಯಾನಿಲಯದಲ್ಲಿರುವುದು ಅಗತ್ಯ ಎಂದು ಭಾವಿಸಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವಂತೆ ಆಹ್ವಾನಿಸಿದರು. ಪ್ರತಿಷ್ಠಿತ ವಿಶ್ವವಿದ್ಯಾನಿಲಯದಿಂದ ಅನಿರೀಕ್ಷಿತವಾಗಿ ಬಂದ ಆಹ್ವಾನವನ್ನು ಅವರು ಸಂತೋಷದಿಂದ ಒಪ್ಪಿಕೊಂಡರು.

ರಾಧಾಕೃಷ್ಣನ್‌ರವರು ಮೈಸೂರಿನ ಹುದ್ದೆಗೆ ರಾಜೀನಾಮೆ ಸಲ್ಲಿಸಿ ಕಲ್ಕತ್ತ ವಿಶ್ವವಿದ್ಯಾನಿಲಯಕ್ಕೆ ಹೊರಟಾಗ ಅವರ ಅಗಲಿಕೆಯ ನೋವನ್ನು ತಾಳಲಾಗದೆ ವಿದ್ಯಾರ್ಥಿಗಳು ಗಳಗಳನೆ ಅತ್ತು ಬಿಟ್ಟರು. ಅವರು ನೀಡಿದ ಬೀಳ್ಕೊಡುಗೆ ಹೃದಯಸ್ಪರ್ಶಿಯಾಗಿತ್ತು. ತಮ್ಮ ಪ್ರೀತಿಯ ಗುರುಗಳನ್ನು ಮೈಸೂರಿನ ರಾಜಬೀದಿಯಲ್ಲಿ ರೈಲು ನಿಲ್ದಾಣದವರೆಗೂ ಟಾಂಗಾ ಗಾಡಿಯಲ್ಲಿ ಕೂರಿಸಿ, ತಾವೇ ಗಾಡಿಯನ್ನು ಎಳೆದು ಗುರುಕಾಣಿಕೆಯನ್ನು ಸಲ್ಲಿಸಿದರು. ಒಬ್ಬ ಆದರ್ಶ ಶಿಕ್ಷಕನಿಗೆ ಇದಕ್ಕಿಂತ ಮತ್ತೇನು ಬೇಕು! ವಿದ್ಯಾರ್ಥಿಗಳು ತೋರಿಸಿದ ಪ್ರೀತಿ, ಗೌರವವನ್ನು ರಾಧಾಕೃಷ್ಣನ್ ಸದಾ ನೆನಪಿಸಿಕೊಳ್ಳುತ್ತಿದ್ದರು.

ಕಲ್ಕತ್ತ ವಿಶ್ವವಿದ್ಯಾನಿಲಯ ಅವರಿಗೆ ಉತ್ತಮ ವಾತಾವರಣವನ್ನು ಕಲ್ಪಿಸಿ ಕೊಟ್ಟಿತು. ಬೋಧನೆಯ ಜೊತೆಗೆ ಅಧ್ಯಯನವನ್ನೂ ಮಾಡಿದರು. "ಭಾರತೀಯ ತತ್ವಜ್ಞಾನ"ವನ್ನು ಕುರಿತು ಮೌಲಿಕ ಗ್ರಂಥವನ್ನು ರಚಿಸಿದರು.

***ವಿದೇಶ ಪ್ರವಾಸ***

ರಾಧಾಕೃಷ್ಣನ್‌ರವರ ಅಗಾಧ ಪಾಂಡಿತ್ಯವನ್ನು ಅವರ ಗ್ರಂಥಗಳು ಹಾಗೂ ಲೇಖನಗಳ ಮೂಲಕ ಮನಗಂಡ ಇಂಗ್ಲೆಂಡಿನ ಮ್ಯಾಂಚೆಸ್ಟರ್ ಕಾಲೇಜಿನ ಪ್ರಾಚಾರ್ಯರಾದ ಡಾ. ಜಾಕ್ಸ್, ತಮ್ಮಲ್ಲಿಗೆ ಆಹ್ವಾನಿಸಿದರು. ಅಲ್ಲಿ ಅವರು "ಹಿಂದೂಗಳ ದೃಷ್ಟಿಯಲ್ಲಿ ಜೀವನ" ಎಂಬ ವಿಷಯದ ಬಗ್ಗೆ ವಿಶೇಷ ಉಪನ್ಯಾಸ ನೀಡಿದರು. ನಂತರ ಅಮೆರಿಕೆಯ ಹಾರ್ವರ್ಡ್ ಹಾಗೂ ಲಂಡನ್ನಿನಲ್ಲಿ ಮಾಡಿದ ವಿದ್ವತ್‌ಪೂರ್ಣ ಉಪನ್ಯಾಸಗಳು ಅಮೆರಿಕಾದ ಖ್ಯಾತ ತತ್ವಜ್ಞಾನಿಗಳ ಮೇಲೆ ಪ್ರಭಾವ ಬೀರಿದವು.





ರಾಧಾಕೃಷ್ಣನ್‌ರವರು ಭಾರತ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸೇತುವೆಯಾಗಿ ಮಹತ್ತರ ಕೊಡುಗೆಯನ್ನು ನೀಡಿದರು. ಎಲ್ಲ ಧರ್ಮಗಳ ಸಾರ ಒಂದೇ ಎಂದು ಪ್ರತಿಪಾದಿಸಿದರು. ತಮ್ಮ ವಿಚಾರಪೂರಿತ ಉಪನ್ಯಾಸಗಳನ್ನು ನೀಡುವುದರ ಮೂಲಕ ವಿಶ್ವಮಾನವರಾದರು. ಇಂಥ ಮಹಾ ಚೇತನಕ್ಕೆ **'ನೈಟ್ ಹುಡ್'** ಪದವಿಯನ್ನು ನೀಡಿ ಗೌರವಿಸುವುದರ ಮೂಲಕ ಬ್ರಿಟೀಷ್ ಸರ್ಕಾರ ತನ್ನನ್ನು ತಾನೇ ಗೌರವಿಸಿಕೊಂಡಿತು. ಇದರಿಂದ ಆ ಪದವಿಗೇ ಗೌರವ ಬಂದಿತು. ಅಂದಿನಿಂದ ಅವರು **'ಸರ್'** ರಾಧಾಕೃಷ್ಣನ್ ಆದರು.

***ದಕ್ಷ ಆಡಳಿತಗಾರ***

ಆಂಧ್ರ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ವಿಶ್ವವಿದ್ಯಾನಿಲಯವನ್ನು ಕಟ್ಟಿ ಬೆಳೆಸಿದರು. ಉತ್ತಮ ಶಿಕ್ಷಕರನ್ನು ನೇಮಿಸಿಕೊಂಡು ವಿಶ್ವವಿದ್ಯಾನಿಲಯದ ಗುಣಮಟ್ಟವನ್ನು ಕಾಪಾಡಿದರು. ಆರ್ಥಿಕ ಸ್ಥಿತಿ ಸುಧಾರಿಸುವಂತೆ ಮಾಡಿದರು. ಇವೆಲ್ಲದರ ನಡುವೆಯೂ ತಮಗೆ ಪ್ರಿಯವಾಗಿದ್ದ; ಉಸಿರಾಗಿದ್ದ ಶಿಕ್ಷಕ ವೃತ್ತಿಯನ್ನು ಬಿಡಲಿಲ್ಲ. ಬಿಡುವಿನ ವೇಳೆಯಲ್ಲಿ ತತ್ವಜ್ಞಾನ ವಿಭಾಗದಲ್ಲಿ ಪಾಠ ಹೇಳಿದರು. ಆಂಧ್ರ ವಿಶ್ವವಿದ್ಯಾನಿಲಯ ಅವರಿಗೆ 'ಗೌರವ ಡಾಕ್ಟರೇಟ್' ನೀಡಿ ಗೌರವಿಸಿತು. ಉಪಕುಲಪತಿಗಳ ಅಧಿಕಾರಾವಧಿ ಮುಗಿದ ಮೇಲೆ ಮತ್ತೆ ಕಲ್ಕತ್ತೆಗೆ ಹಿಂತಿರುಗಿದರು.

ಭಾರತದ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳಲ್ಲಿ ಒಂದಾಗಿದ್ದ ಬನಾರಸ್ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಮದನಮೋಹನ ಮಾಳವೀಯರು ಅನಾರೋಗ್ಯದ ಕಾರಣ ನಿವೃತ್ತಿಯನ್ನು ಬಯಸಿದರು. ತಮ್ಮ ಉತ್ತರಾಧಿಕಾರಿಯಾಗಿ ರಾಧಾಕೃಷ್ಣನ್‌ರವರನ್ನು ನೇಮಿಸಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದರು. ಅವರ ಬಯಕೆಯನ್ನು ರಾಧಾಕೃಷ್ಣನ್‌ರವರು ನೆರವೇರಿಸಿದರು. ತಮ್ಮ ಬಹುತೇಕ ವೇಳೆಯನ್ನು ಬನಾರಸ್ ವಿಶ್ವವಿದ್ಯಾನಿಲಯದ ಸರ್ವಾಂಗೀಣ ಅಭಿವೃದ್ಧಿಗೆ ಮೀಸಲಾಗಿಟ್ಟರು.

ಶಿಕ್ಷಣದಿಂದಲೇ ದೇಶದ ಪ್ರಗತಿ ಸಾಧ್ಯವೆಂದು ರಾಧಾಕೃಷ್ಣನ್ ದೃಢವಾಗಿ ನಂಬಿದ್ದರು. ಅನೇಕ ಹೊಸ ಹೊಸ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದರು. ಶಾರೀರಿಕ ಶಿಕ್ಷಣ, ಮಹಿಳಾ ಶಿಕ್ಷಣ, ಆಯುರ್ವೇದ, ತಾಂತ್ರಿಕ ಶಿಕ್ಷಣಕ್ಕೆ ಮಹತ್ವ ನೀಡಿದರು. ತಮ್ಮ ಅಪಾರವಾದ ಅನುಭವದಿಂದ ವಿಶ್ವವಿದ್ಯಾನಿಲಯಕ್ಕೆ ಘನತೆ ಗೌರವವನ್ನು ತಂದುಕೊಟ್ಟರು.

***ಕೃತಿಗಳು***

ರಾಧಾಕೃಷ್ಣನ್‌ರವರು ತತ್ವಜ್ಞಾನವನ್ನು ಕುರಿತಂತೆ ಅನೇಕ ಉತ್ತಮ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ "ರವೀಂದ್ರನಾಥ ಟ್ಯಾಗೂರರ "ತತ್ವಜ್ಞಾನ", "ಸಮಕಾಲೀನ ತತ್ವಜ್ಞಾನದಲ್ಲಿ ಧರ್ಮದ ಆಳ್ವಿಕೆ", "ಭಾರತೀಯ ತತ್ವಜ್ಞಾನ", "ಹಿಂದೂ ದೃಷ್ಟಿಯಲ್ಲಿ ಜೀವನ", "ಕಲ್ಕಿ ಅಥವಾ ನಾಗರೀಕತೆಯ ಭವಿತವ್ಯ", "ಮತ ಧರ್ಮಗಳ ಹೋಲಿಕೆ", "ಆದರ್ಶವಾದಿಯ ದೃಷ್ಟಿಯಲ್ಲಿ ಜೀವನ", "ಭಗವದ್ಗೀತಾ ಧಮ್ಮಪದ" ಮುಖ್ಯವಾದವುಗಳು.

***ನೆಹರೂ ಮೇಲೆ ಪ್ರಭಾವ***

ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದ ಪಂಡಿತ ಜವಾಹರಲಾಲ್ ನೆಹರೂ ಅವರು ಅನೇಕ ಸಲ ಸೆರೆಮನೆ ವಾಸ ಅನುಭವಿಸಬೇಕಾಯಿತು. ಸೆರೆಮನೆಯಲ್ಲಿದ್ದಾಗ ಅವರು ರಾಧಾಕೃಷ್ಣನ್‌ರವರ ಕೃತಿಗಳನ್ನು ಓದಿ ಅವರ ಪಾಂಡಿತ್ಯವನ್ನು ಮೆಚ್ಚಿದರು. ಸಮಯ ಬಂದಾಗ ಅವರ ಸೇವೆಯನ್ನು ಬಳಸಿಕೊಳ್ಳಲು ನಿರ್ಧರಿಸಿದರು.

ನೆಹರೂರವರು ಭಾರತದ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಶಿಕ್ಷಣಕ್ಕೆ ವಿಶೇಷ ಮಹತ್ವವನ್ನು ನೀಡಿದರು. ಹೊಸ ರಾಷ್ಟ್ರಚೈತನಕ್ಕೆ ಹೊಂದಿಕೆಯಾಗುವಂತೆ ಶಿಕ್ಷಣದಲ್ಲಿ ಮಹತ್ತರ ಬದಲಾವಣೆಗಳನ್ನು ತರಬೇಕೆಂದು ಯೋಚಿಸಿದರು. ಅದಕ್ಕಾಗಿ ಶಿಕ್ಷಣ ಸಮಿತಿಯನ್ನು ನೇಮಿಸಿ ಡಾ. ರಾಧಾಕೃಷ್ಣನ್‌ರವರನ್ನು ಕಾರ್ಯಾಧ್ಯಕ್ಷರನ್ನಾಗಿ ಮಾಡಿದರು. ರಾಧಾಕೃಷ್ಣನ್‌ರವರ ಮಾರ್ಗದರ್ಶನದಲ್ಲಿ ಸಮಿತಿ ತನ್ನ ವರದಿಯನ್ನು ಸಲ್ಲಿಸಿತು. ಅದು ತನ್ನ ವರದಿಯಲ್ಲಿ ಸಮಗ್ರ ವ್ಯಕ್ತಿತ್ವ ರೂಪಿಸಿಕೊಳ್ಳುವಂಥ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಬೇಕೆಂದು ಸೂಚಿಸಿತು. ಬೌದ್ಧಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ದೈಹಿಕ ಬೆಳವಣಿಗೆಗೆ ಪೂರಕವಾಗುವಂತೆ ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸುವಂತೆ ಸಲಹೆ ಮಾಡಿತು.

***ರಾಯಭಾರಿ***

ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಅದು ತನ್ನ ನೆರೆ ರಾಷ್ಟ್ರಗಳೊಂದಿಗೆ ಸುಮಧುರ ಬಾಂಧವ್ಯವನ್ನು ಹೊಂದಲು ಬಯಸಿತು. ಭಾರತದ ಪ್ರಧಾನಿ ಜವಾಹರಲಾಲ್ ನೆಹರೂರವರು ದೇಶದ ಹಿತದೃಷ್ಟಿಯಿಂದ ಇದಕ್ಕೆ ಮೊದಲ ಆದ್ಯತೆಯನ್ನು ಕೊಟ್ಟರು. ಪ್ರಬಲ ರಾಷ್ಟ್ರಗಳೊಂದಿಗೆ ನಿಕಟ ಸಂಪರ್ಕವನ್ನು ಹೊಂದಲು ಬಯಸಿದರು. ರಷ್ಯಾದ ಆಡಳಿತ ಸೂತ್ರವನ್ನು

ಹಿಡಿದಿದ್ದ ಸರ್ವಾಧಿಕಾರಿ ಸ್ಟಾಲಿನ್‌ನೊಂದಿಗೆ ಸ್ನೇಹವನ್ನು ಬೆಳೆಸಲು ನೆಹರೂ ಆಪೇಕ್ಷಿಸಿದರು. ಅದರಂತೆ ೧೯೪೯ರಲ್ಲಿ ರಷ್ಯಾದ ರಾಯಭಾರಿಯಾಗಿ ರಾಧಾಕೃಷ್ಣನ್‌ರವರನ್ನು ಆಯ್ಕೆ ಮಾಡಿದರು. ಅನೇಕ ಜನ ನೆಹರೂವರ ಆಯ್ಕೆಯ ಬಗ್ಗೆ ಅನುಮಾನ ವ್ಯಕ್ತಪಡಿಸಿದರು. ಸರ್ವಾಧಿಕಾರಿಯಾದ ಸ್ಟಾಲಿನ್ ಮುಂದೆ ತತ್ವಜ್ಞಾನದ ಈ ಪ್ರಾಧ್ಯಾಪಕ ಯಾವ ಲೆಕ್ಕ? ಎಂದು ಜರಿದಿದ್ದೂ ಉಂಟು. ಜನರ ಮಾತಿಗೆ ನೆಹರೂ ಗಮನ ನೀಡಲಿಲ್ಲ; ಅವರು ತಮ್ಮ ಅಚಲ ನಿರ್ಧಾರವನ್ನು ಬದಲಿಸಲಿಲ್ಲ. ಡಾ. ರಾಧಾಕೃಷ್ಣನ್‌ರವರು ನೆಹರೂರವರ ನಂಬಿಕೆಯನ್ನು ಹುಸಿ ಮಾಡಲಿಲ್ಲ. ತಮ್ಮ ಸರಳತೆ, ಆಕರ್ಷಕ ವ್ಯಕ್ತಿತ್ವದಿಂದ ಸ್ಟಾಲಿನ್‌ನ ಕಠಿಣ ಮನಸ್ಸನ್ನು ಗೆದ್ದರು. ಕಬ್ಬಿಣದಂತಹ ಆತನ ಹೃದಯವನ್ನು ಹೂವನ್ನಾಗಿ ಮಾರ್ಪಡಿಸಿದರು. ಸ್ಟಾಲಿನ್‌ನ ಪ್ರೀತಿ ವಿಶ್ವಾಸವನ್ನು ಗಳಿಸುವುದರ ಮೂಲಕ ರಾಷ್ಟ್ರದ ಘನತೆ ಗೌರವವನ್ನು ಎತ್ತಿ ಹಿಡಿದರು. ಅಂದು ಅವರ ಆಯ್ಕೆಯನ್ನು ತೆಗಳಿದವರೇ ನೆಹರೂರವರ ಆಯ್ಕೆ ಸಮಯೋಚಿತ ಎಂದು ಮೆಚ್ಚುಗೆ ಸೂಚಿಸಿದರು.

**ಉಪರಾಷ್ಟ್ರಪತಿ**

ಡಾ. ರಾಧಾಕೃಷ್ಣನ್‌ರವರ ಅಸಾಧಾರಣವಾದ ವ್ಯಕ್ತಿತ್ವ, ಅವರು ವಹಿಸಿಕೊಂಡ ಕೆಲಸವನ್ನು ನಿರ್ವಹಿಸುವ ಜಾಣ್ಮೆಯನ್ನು ಅರ್ಥ ಮಾಡಿಕೊಂಡ ನೆಹರೂರವರು ೧೯೫೨ರಲ್ಲಿ ಭಾರತದ ಉಪರಾಷ್ಟ್ರಪತಿಗಳನ್ನಾಗಿ ಮಾಡುವಲ್ಲಿ ಯಶಸ್ವಿಯಾದರು. ಅತ್ಯಂತ ಜವಾಬ್ದಾರಿಯುತವಾದ ಹುದ್ದೆಯಲ್ಲಿ ಹತ್ತು ವರ್ಷ ನಿಷ್ಠೆಯಿಂದ ಸೇವೆ ಸಲ್ಲಿಸಿದರು. ರಾಜ್ಯ ಸಭೆಯ ಅಧ್ಯಕ್ಷರಾಗಿ ಅವರು ತೋರಿದ ತಾಳ್ಮೆ ತಳೆದ ನಿಲುವು, ವಹಿಸಿದ ಪಾತ್ರ ಮುಂದಿನವರಿಗೆ ದಾರಿದೀಪವಾಯಿತು.

**ಸಾಂಸ್ಕೃತಿಕ ರಾಯಭಾರಿ**

ಉಪರಾಷ್ಟ್ರಪತಿಗಳಾಗಿದ್ದ ಅವಧಿಯಲ್ಲಿ ಭಾರತದ ಸಾಂಸ್ಕೃತಿಕ ರಾಯಭಾರಿಯಾಗಿ, ಅಮೆರಿಕಾ, ಕೆನಡಾ, ಚೀನಾ, ಜಪಾನ್, ಇಂಡೋನೇಷಿಯಾ ಮೊದಲಾದ ದೇಶಗಳಿಗೆ ಭೇಟಿ ನೀಡಿ, ಭಾರತದ ಸಂಸ್ಕೃತಿಯನ್ನು ಅದು ಬೆಳೆದು ಬಂದ ಭವ್ಯ ಪರಂಪರೆಯನ್ನು ಪರಿಚಯ ಮಾಡಿ ಕೊಟ್ಟು ಭಾರತದ ಬಗ್ಗೆ ಅವರಲ್ಲಿ ಗೌರವ ಮೂಡುವಂತೆ ಮಾಡಿದರು.

**ರಾಷ್ಟ್ರಪತಿ**

ಹತ್ತು ವರ್ಷಗಳ ಕಾಲ ಉಪರಾಷ್ಟ್ರಪತಿಯಾಗಿ ಸೇವೆ ಸಲ್ಲಿಸಿದ ಡಾ. ರಾಧಾಕೃಷ್ಣನ್‌ರವರನ್ನು ೧೯೬೨ರಲ್ಲಿ ರಾಷ್ಟ್ರಪತಿಗಳಾಗಿ ಆಯ್ಕೆ ಮಾಡಿದಾಗ ಎಲ್ಲರೂ ಅವರ ಆಯ್ಕೆಯನ್ನು ಸಂಭ್ರಮದಿಂದ ಸ್ವಾಗತಿಸಿದರು. ಪ್ರಧಾನಿ ನೆಹರೂ ರವರು ಆ ಸಂದರ್ಭದಲ್ಲಿ 'ಒಬ್ಬ ತತ್ವಜ್ಞಾನಿಯನ್ನು ದೇಶದ ಅತ್ಯುನ್ನತ ಸ್ಥಾನದಲ್ಲಿ ಕೂರಿಸಿದ ಹಿರಿಮೆ ನಮ್ಮದಾಗಿದೆ' ಎಂದು ಹೇಳಿದ ಮಾತು ಅತಿಶಯೋಕ್ತಿಯಲ್ಲ. ರಾಧಾಕೃಷ್ಣನ್‌ರವರು ತಮಗೆ ದೊರೆತ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಆ ಸ್ಥಾನಕ್ಕೆ ಘನತೆ, ಗೌರವವನ್ನು ತಂದುಕೊಟ್ಟರು.

**ಪ್ರಶಸ್ತಿಗಳು**

ಡಾ. ರಾಧಾಕೃಷ್ಣನ್ ಅವರ ಪ್ರತಿಭೆಗೆ, ವಿದ್ವತ್ತಿಗೆ ಸಂದ ಪ್ರಶಸ್ತಿ, ಗೌರವಗಳು ಅನೇಕ. ವಿದೇಶಿ ಹಾಗೂ ನಮ್ಮ ದೇಶದ ವಿಶ್ವವಿದ್ಯಾನಿಲಯಗಳು ಅವರಿಗೆ "ಡಾಕ್ಟರೇಟ್" ಪದವಿಯನ್ನು ನೀಡಿ ಗೌರವಿಸಿದವು. 'ಬ್ರಿಟಿಷ್ ಅಕಾಡೆಮಿಕ್ ಫೆಲೋಶಿಪ್', 'ಆರ್ಡರ್ ಆಫ್ ಮೆರಿಟ್', ಮಂಗೋಲಿಯ ದೇಶ 'ಮಾಸ್ಟರ್ ಆಫ್ ವಿಸ್ಡಂ' ಗೌರವವನ್ನು ನೀಡಿತು. ಪೋಪ್‌ಪಾಲ್ ಅತ್ಯಂತ ಪ್ರತಿಷ್ಠಿತವಾದ 'ಗೋಲ್ಡನ್ ಸರ್' ಪ್ರಶಸ್ತಿಯನ್ನು ನೀಡಿದರು. ಭಾರತ ಸರ್ಕಾರ ಇವರು ಸಲ್ಲಿಸಿದ ಅನುಪಮ ಸೇವೆಗಾಗಿ "ಭಾರತರತ್ನ" ಪ್ರಶಸ್ತಿಯನ್ನು ನೀಡಿ ಗೌರವಿಸಿತು.

ಭಾರತದ ಕಣ್ಮಣಿ, ಅಪೂರ್ವ ಚೇತನ ಡಾ. ರಾಧಾಕೃಷ್ಣನ್‌ರವರು ೧೯೭೫ರ ಏಪ್ರಿಲ್ ೧೭ರಂದು ಇಹಲೋಕವನ್ನು ತ್ಯಜಿಸಿದರು. ಅವರು ಭೌತಿಕವಾಗಿ ನಮ್ಮ ಮುಂದೆ ಇಲ್ಲದೇ ಹೋದರೂ ಅವರು ಬಿಟ್ಟುಹೋದ ಆದರ್ಶಗಳು ಸದಾ ನಮ್ಮೊಂದಿಗೆ ಹಚ್ಚ ಹಸಿರಾಗಿದೆ.



"ನಾಗರಿಕತೆ ಸದೃಢ, ಸುಪ್ತ ಚೇತನದ ಸದ್ವರ್ತನೆ; ದೇಹದ ಅಥವಾ ಮನಸಿನದಲ್ಲ. ಅದಕ್ಕೆ ಶಕ್ತಿ, ಜ್ಞಾನವಷ್ಟೇ ಸಾಲದು; ನೈತಿಕತೆಯೂ ಬೇಕು. ಮನುಷ್ಯ ಮಹತ್ವಾಕಾಂಕ್ಷೆಯ ಸಕ್ರಿಯ ಶಕ್ತಿಯಾಗಬೇಕು. ಕಾಲಚಕ್ರದಲ್ಲಿ ಪ್ರಗತಿ, ಪರಿವರ್ತನೆ ಸಹಜ. ಅದನ್ನು ಮೂಕ ಪ್ರೇಕ್ಷಕನಂತೆ ದೂರದಲ್ಲಿ ನಿಂತು ವೀಕ್ಷಿಸಬಾರದು. ತನ್ನ ಆದರ್ಶಗಳಿಗೆ ಅನುರೂಪವಾಗುವಂತೆ ಅವುಗಳಿಗೆ ಹತ್ತಿರವಾಗಬೇಕು. ಅವುಗಳನ್ನು ತನ್ನದಾಗಿಸಿಕೊಳ್ಳಬೇಕು. ಮನುಷ್ಯ ಜೀವನದಲ್ಲಿ ಐಹಿಕ ಜಗತ್ತಿನ ವಿದ್ಯಮಾನಗಳು ಮಾತ್ರ ಪ್ರಾಮುಖ್ಯತೆ ಪಡೆಯಬಾರದು".

- ಡಾ. ಎಸ್. ರಾಧಾಕೃಷ್ಣನ್







# ಪರಿಸರ ಮಾಲಿನ್ಯ ನಿರ್ಮೂಲನ

- ಜಿ. ನಾರಾಯಣ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು.

'ಪರಿಸರ ಮಾಲಿನ್ಯ ನಿರ್ಮೂಲನ" ಎಂಬ ಘೋಷಣೆಯನ್ನು ಈಚೆಗೆ ನಾವು ವಿಶೇಷವಾಗಿ ಕೇಳುತ್ತಿದ್ದೇವೆ. ಕೇಂದ್ರ ಮಂತ್ರಿಮಂಡಲದಲ್ಲಿ ಈ ಕಾರ್ಯನಿರ್ವಹಣೆಗೆ ಒಂದು ಸಚಿವಾಲಯವೇ ಇದೆ. ಮಾನವನ ಆರೋಗ್ಯಕರ ಬದುಕಿಗೆ, ಪರಿಸರ ನಿರ್ಮಲವಾಗಿರಬೇಕೆಂಬುದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಮಾಲಿನ್ಯದಿಂದಲೇ ಜೀವಿಯ ಹುಟ್ಟು ಎಂಬುದನ್ನು ನಾವು ಮರೆಯುವಂತಿಲ್ಲ. ಕಮಲ ಹುಟ್ಟುವುದು ಕೆಸರಿನಲ್ಲಿ. ಒಳ್ಳೆಯ ಬೆಳೆ ಬೆಳೆಯುವುದು ಗೊಬ್ಬರದ ಪಾತಿಯಲ್ಲಿ. ಎಷ್ಟೋ ಕ್ರಿಮಿಗಳು ಹುಟ್ಟಿ ಸಾಯುವುದು ಮಾಲಿನ್ಯದಲ್ಲಿ. ಅವುಗಳಿಗೆ ತಾವು ಜೀವಿಸಿರುವುದು ಮಲಿನದ ಮಡಿಲಿನಲ್ಲಿ ಎಂಬ ಅರಿವಿರುವುದಿಲ್ಲ. ಅಲ್ಲಿಂದ ಹೊರ ತೆಗೆದು ಅವುಗಳಿಗೆ ಸ್ವಚ್ಛ ವಾತಾವರಣ ಕಲ್ಪಿಸಿದರೆ ಅವು ಬದುಕಲಾರವು. ಆದರೆ ಮನುಷ್ಯನಾದವನು ತನ್ನ ವಿವೇಚನಾಶಕ್ತಿಯಿಂದ, ಶುದ್ಧ ಯಾವುದು; ಅಶುದ್ಧ ಯಾವುದು ಎಂದು ಅರ್ಥಮಾಡಿ ಕೊಳ್ಳುತ್ತಾನೆ. ತನ್ನ ತಿಳಿಯಾದ, ಪರಿಶುದ್ಧವಾದ ಬಾಳಿಗೆ ಹೊಸ ವಾತಾವರಣವನ್ನು ಕಲ್ಪಿಸಿಕೊಂಡು ಮಾಲಿನ್ಯತೆಯಿಂದ ದೂರವಿರಲು ಯತ್ನಿಸುತ್ತಾನೆ ಮತ್ತು ಮಾಲಿನ್ಯವನ್ನು ದೂರ ಸರಿಸಿದರೆ ತನ್ನ ಆರೋಗ್ಯ ಸುಧಾರಿಸುತ್ತದೆ ಎಂದು ನಂಬುತ್ತಾನೆ.

ಒಂದು ದೃಷ್ಟಿಯಿಂದ ಈ ಪರಿಸರ ಮಾಲಿನ್ಯವನ್ನು ಸೃಷ್ಟಿಸಿಕೊಂಡವನೂ ಅವನೇ. ಪ್ರಕೃತಿ ಸಕಲ ಜೀವ ಕೋಟಿಯ ಚೈತನ್ಯಕ್ಕೆ ಶುದ್ಧ ಪರಿಸರವನ್ನು ಸೃಷ್ಟಿಸಿದೆ. ಅದಕ್ಕೆ ನಮ್ಮ ಜನ ಕಾಡನ್ನು ರಕ್ಷಿಸಿದರು, ಬೆಳೆಸಿದರು. ಈಗಲೂ ಆ ಕೆಲಸ ಒಂದು ಪ್ರಮಾಣದಲ್ಲಿ ನಡೆಯುತ್ತಿದೆ. ಜೀವಕೋಟಿಯ ಪರಿಶುದ್ಧತೆಗೆ ಗಿಡ ಮರಗಳ ಅಸ್ತಿತ್ವ ಅಗತ್ಯವಾಗಿದೆ. ಆ ಕಾರಣದಿಂದಲೇ ಪರಿಸರ ವಿಜ್ಞಾನಿಗಳು ಪ್ರಥಮತಃ ಅರಣ್ಯ ಸಂರಕ್ಷಣೆಗೆ ಮೊದಲ ಸ್ಥಾನ ಕೊಡುತ್ತಾರೆ. ಇಷ್ಟು ಪ್ರಮಾಣದ ಜನಸಂಖ್ಯೆಯಿರುವ ಪ್ರದೇಶದಲ್ಲಿ ಇಂತಿಷ್ಟು ಅರಣ್ಯ ಪ್ರದೇಶ ಇರಬೇಕು ಎಂದು ನಿರ್ಧರಿಸುತ್ತಾರೆ. ಅರಣ್ಯ ಬಾಹುಳ್ಯದಿಂದ ಪರಿಸರ ಶುದ್ಧವಾಗುತ್ತದೆಂಬ ತಿಳಿವಳಿಕೆಯೇ ಇದಕ್ಕೆ ಕಾರಣ.

ಹಿಂದೆ ಋಷ್ಯಾಶ್ರಮಗಳು ಇಂಥ ವನಾಂತರಗಳಲ್ಲಿ ನೆಲೆಗೊಂಡಿದ್ದವು. ಅಲ್ಲಿನ ಹೋಮ ಧೂಮಗಳು ಆರೋಗ್ಯಕ್ಕೆ ಔಷಧಿಗಳಾಗಿದ್ದುವು. ನಮ್ಮ ಸಂಸ್ಕೃತಿ ಅಲ್ಲಿಂದ ಮೂಡಿಬಂದಿತು. ಆದರೆ ವಿಚಾರವಂತ ಜನ ಹೆಚ್ಚಾದಂತೆ, ಗ್ರಾಮ, ಊರು, ಪಟ್ಟಣ, ನಗರಗಳು ಹುಟ್ಟಿಕೊಂಡವು. ಅಲ್ಲಿ ಪ್ರಕೃತಿಯು ನೆಲೆತಪ್ಪಿ, ನಾಗರಿಕತೆಯ ಗಾಳಿ ಬೀಸಿ, ಹೊಸ ಪರಿಸರ ಸೃಷ್ಟಿಯಾಯಿತು. ಅದರ ಜೊತೆಗೆ ಮಾಲಿನ್ಯವೂ ಬೇರು ಬಿಟ್ಟಿತು. ಜನಸಂಖ್ಯೆ ಬೆಳೆದಂತೆ ಮಾಲಿನ್ಯದ ಪ್ರಮಾಣವೂ ಹೆಚ್ಚುತ್ತಾ ಹೋಯಿತು. ವೈಜ್ಞಾನಿಕ ಸಂಶೋಧನೆಗಳಿಂದ ಜನರ ಜೀವನ ಸೌಲಭ್ಯಗಳನ್ನು ಒದಗಿಸುವ ಸಣ್ಣ ಸಣ್ಣ ಗಿರಣಿಗಳು, ಕಾರ್ಖಾನೆಗಳು, ನಾನಾ ವಿಧವಾದ ಯಂತ್ರಗಳು, ಇತ್ಯಾದಿಗಳ ನಿರ್ಮಾಣದಿಂದ ಉದ್ಭವಿಸಿದ ಮಾಲಿನ್ಯ ಪರಿಸರ, ಮಾನವನ ಶಕ್ತಿಯನ್ನು ಮೀರಿ ಬೆಳೆಯತೊಡಗಿತು. ಅದನ್ನು ನಿಯಂತ್ರಿಸುವತ್ತ ಅವನ ಗಮನ ಮಂದವಾಯಿತು. ಈ ಸೌಲಭ್ಯ ಸಹಾಯಗಳ ಅವಶ್ಯಕತೆಯನ್ನು ಬೆಳೆಸುವಲ್ಲಿ ಅವನ ಬುದ್ಧಿಶಕ್ತಿ ವಿಪರೀತವಾಗಿ, ಅವುಗಳಿಂದ ಹೊರಬರುವ ಮಲಿನ ವಾಯುವಿನ ವಾತಾವರಣ ಅವನ ಬದುಕಿಗೆ ಮಾರಕವಾಗತೊಡಗಿತು. ಇದನ್ನು ಅವನು ಕಂಡುಕೊಂಡದ್ದು ಬಹುಕಾಲದ ನಂತರ. ಹೀಗಾಗಿ ಅದು ಅವನ ಹತೋಟಿಯನ್ನು ಮೀರಿ ವೈಪರೀತ್ಯಕ್ಕೆ ಕಾರಣವಾಯಿತು.

ವಿಜ್ಞಾನವನ್ನೇ ಜೀವನದ ಎಲ್ಲ ಸ್ತರಗಳಿಗೆ, ಕಡೆಗೆ ನಮ್ಮ ಸಾವಿಗೂ ಅದನ್ನೇ ನಂಬಿರುವ ನಾವು, ಅದನ್ನು ಮತ್ತು ಅದರಿಂದ ಉದ್ಭವವಾಗುವ ಸೌಲಭ್ಯಗಳನ್ನು ಈಗ ಕೈಬಿಡುವುದಂತೂ ಮೂರ್ಖತನ. ಅದರ ಬದಲು, ಪರಿಸರ ಮಾಲಿನ್ಯವನ್ನು ನಿರ್ಮೂಲನ ಮಾಡಲು ಅದೇ ವಿಜ್ಞಾನವನ್ನು ಬಳಸಿಕೊಳ್ಳುವ ಪ್ರಯತ್ನವನ್ನು ನಾವು ಯೋಚಿಸಬೇಕು. 'ಪರಿಸರ ಮಾಲಿನ್ಯ' ಕುರಿತ ವಿಚಾರವನ್ನು, ಬರಿಯ ಪ್ರಾಕೃತಿಕ ಹಿನ್ನೆಲೆಗೆ ಮಾತ್ರ ಅನ್ವಯಿಸಲಾಗುತ್ತದೆ. ಇಂದು ಈ ಮಾಲಿನ್ಯ ಸ್ಥಿತಿ, ನಗರದ, ಪಟ್ಟಣಗಳಲ್ಲೂ, ಕೈಗಾರಿಕಾ ಸ್ಥಾಪನಾ ಸ್ಥಳಗಳಲ್ಲೂ ಬೆಳೆಯುತ್ತಿರುವುದನ್ನು ಕಾಣುತ್ತೇವೆ. ಅದರ ನಿಯಂತ್ರಣವನ್ನು ಈಗಿನಿಂದಲೇ ಕೈಗೊಳ್ಳದೇ ಹೋದರೆ 'ಪರಿಸರ ಮಾಲಿನ್ಯ ನಿರ್ಮೂಲನ' ಘೋಷಣೆ ಬರೀ ಘೋಷಣೆಯಾಗಿಯೇ ಉಳಿಯುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆಯ ಆಜೀವ ಸದಸ್ಯರಲ್ಲಿ ಒಂದು ಮನವಿ

ಆತ್ಮೀಯರೆ,

ತಾವು ಅಭಿಮಾನ ಪೂರ್ವಕವಾಗಿ ಶ್ರೀಮಠದ ಮುಖವಾಣಿಯಾದ 'ಸಿದ್ಧಗಂಗಾ' ಮಾಸಪತ್ರಿಕೆಯ ಪುರೋಭಿವೃದ್ಧಿಗಾಗಿ ಆಜೀವ ಸದಸ್ಯರಾಗಿ ಪತ್ರಿಕೆಯ ಮುನ್ನಡೆಗಾಗಿ ಸಹಕರಿಸುತ್ತಿರುವುದಕ್ಕಾಗಿ ತುಂಬು ಹೃದಯದ ಕೃತಜ್ಞತೆಗಳು.

ವರ್ಷದಿಂದ ವರ್ಷಕ್ಕೆ ಮುದ್ರಣದ ವೆಚ್ಚ ದುಬಾರಿಯಾಗುತ್ತಿದ್ದು ಪತ್ರಿಕೆಯನ್ನು ಪ್ರಕಟಿಸಲು ತುಂಬಾ ಕಷ್ಟವಾಗುತ್ತಿದೆ. ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಆಜೀವ ಸದಸ್ಯರಾಗಿರುವ ತಮ್ಮನ್ನು ಮತ್ತೊಮ್ಮೆ ಸಹಕಾರಕ್ಕಾಗಿ ಪ್ರಾರ್ಥಿಸುತ್ತಿದ್ದೇವೆ.

ತಾವು ಸಲ್ಲಿಸಿದ ಆಜೀವ ಸದಸ್ಯತ್ವದ ಮೊಬಲಗು ಪ್ರಾರಂಭದಲ್ಲಿ ೧೦೦ ರೂಗಳು ಎಂಬುದನ್ನು ತಮ್ಮ ಗಮನಕ್ಕೆ ತರಬಯಸುತ್ತೇವೆ. ಅನಂತರದಲ್ಲಿ ೧೫೦, ಮತ್ತು ೨೫೦ ಹಾಗೂ ೩೫೦ ರೂ.ಗಳಿಗೆ ನಿಗಧಿ ಪಡಿಸಲಾಗಿತ್ತು. ಈಗ ಆಜೀವ ಸದಸ್ಯತ್ವದ ಮೊಬಲಗು ೫೦೦ ರೂಗಳಾಗಿರುತ್ತದೆ. ಆದುದರಿಂದ ತಾವು ದಯವಿಟ್ಟು ಪ್ರಸ್ತುತ ಐದುನೂರು ರೂ.ಗಳಿಗೆ ಸರಿಹೊಂದುವಂತೆ ಉಳಿದ ಹಣವನ್ನು ಕಳುಹಿಸಿಕೊಡಬೇಕಾಗಿ ವಿನಂತಿಸಿಕೊಳ್ಳುತ್ತೇವೆ.

ಪತ್ರಿಕೆ ೧೯೯೮ರ ಜನವರಿಯಿಂದ ಹೊಸ ವಿನ್ಯಾಸ ಆಕರ್ಷಕ ಮುಖಪುಟದೊಂದಿಗೆ ಪ್ರಕಟಿಸುತ್ತಿರುವುದು ತಮಗೆ ತಿಳಿದಿದೆ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ನಿರೀಕ್ಷಿಸುತ್ತೇವೆ.

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು
ಸಿದ್ಧಗಂಗಾ ಮಾಸಿಕ

### ಇತಿಹಾಸ ತಜ್ಞ, ಕರ್ನಾಟಕ ಗ್ಯಾಸೆಟಿಯರ್‌ನ ನಿವೃತ್ತ ಪ್ರಧಾನ ಸಂಪಾದಕ ಕೆ. ಅಭಿಶಂಕರ್ ನಿಧನ

ಕರ್ನಾಟಕ ಗ್ಯಾಸೆಟಿಯರ್‌ನ ನಿವೃತ್ತ ಪ್ರಧಾನ ಸಂಪಾದಕರು, ಶ್ರೇಷ್ಠ ಇತಿಹಾಸ ತಜ್ಞರೂ ಆಗಿದ್ದ ಕೆ. ಅಭಿಶಂಕರ್ ಅವರು ಸೆಪ್ಟೆಂಬರ್ ೯ರಂದು ನಿಧನರಾದರು. ಅವರು ಹರ್ಡೇಕರ್ ಮಂಜಪ್ಪನವರ ಶಿಷ್ಯರಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದರು. ಇತ್ತೀಚೆಗೆ ಶಿರಸಿ ನಡೆದ ಇತಿಹಾಸ ಸಮ್ಮೇಳನದಲ್ಲಿ ಅಧ್ಯಕ್ಷರಾಗಿದ್ದರು. ಶರಣ ಸಾಹಿತ್ಯದ ಬಗ್ಗೆ ಅಪಾರವಾದ ಆಸಕ್ತಿಯನ್ನು ಹೊಂದಿದ್ದ ಕೆ. ಅಭಿಶಂಕರ್‌ರವರು ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನೆಯ ವಿಶ್ವಸ್ಥ ಮಂಡಳಿ ಹಾಗೂ ಶ್ರೀ ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನಗಳ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದರು.

ಕೆ. ಅಭಿಶಂಕರ್ ನಿಧನಕ್ಕೆ 'ಸಿದ್ಧಗಂಗಾ' ಸಂಪಾದಕ ಮಂಡಳಿ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

### ಮನವಿ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗವು ಕನ್ನಡ ಜಾನಪದ ಗ್ರಂಥಸೂಚಿಯ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಗ್ರಂಥಸೂಚಿಯು ಪ್ರಕಟಿತ ಕೃತಿಯ ಲೇಖಕ/ ಸಂಪಾದಕ ಹೆಸರು, ಕೃತಿಯ ಹೆಸರು, ಪ್ರಕಟಣೆಗೊಂಡ ವರ್ಷ, ಕೃತಿಯ ಗಾತ್ರ, ಪುಟಗಳ ಸಂಖ್ಯೆ, ಪ್ರಕಾಶನದ ಹೆಸರು, ಕೃತಿ ಒಳಗೊಂಡಿರುವ ವಿಷಯಗಳ ಸಾರಾಂಶ ಮುಂತಾದ ಅಂಶಗಳನ್ನು ಒಳಗೊಂಡಿರುತ್ತದೆ. ಈ ಮೇಲಿನ ಅಂಶಗಳಿಗೆ ಸಂಬಂಧಿಸಿದ ವಿವರಗಳು ಅಥವಾ ಜಾನಪದಕ್ಕೆ ಸಂಬಂಧಿಸಿದ ಕೃತಿಗಳಿದ್ದಲ್ಲಿ ಆಸಕ್ತರು, ಲೇಖಕರು, ಮುದ್ರಕರು ಮತ್ತು ಪ್ರಕಾಶಕರು ಮಾಹಿತಿಗಳನ್ನು ಒದಗಿಸಿಕೊಡಬೇಕೆಂದು ಈ ಮೂಲಕ ಕೋರಲಾಗಿದೆ.

ಕೃತಿಯ ಮಾಹಿತಿಗಳು ಅಥವಾ ಕೃತಿಗಳನ್ನು ಈ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ.

**ಡಾ. ಮಂಜುನಾಥ ಬೇವಿನಕಟ್ಟಿ**
ಮುಖ್ಯಸ್ಥರು, ಜಾನಪದ ವಿಭಾಗ ಕನ್ನಡ ವಿಶ್ವವಿದ್ಯಾಲಯ,
ಹಂಪಿ ವಿದ್ಯಾರಣ್ಯ, ಕಮಲಾಪುರ-583 221
ತಾ. ಹೊಸಪೇಟೆ, ಬಳ್ಳಾರಿ ಜಿಲ್ಲೆ





# ಸರ್ವಜ್ಞನ ದೃಷ್ಟಿಯಲ್ಲಿ ಗುರುವಿನ ಸ್ಥಾನ

-- ರಮೇಶ ಬಾಬು ಯಾಳಗಿ
ರಾಜ್ಯಶಾಸ್ತ್ರ ಉಪನ್ಯಾಸಕರು
ರಂಗಂಪೇಟೆ
ಗುಲಬರ್ಗಾ ಜಿಲ್ಲೆ

ಸರ್ವಜ್ಞ ಒಬ್ಬ ಮಹಾನ್ ದಾರ್ಶನಿಕ ಕವಿ. ತನ್ನ ತ್ರಿಪದಿಗಳ ಮೂಲಕ ಕವಿಯು ಸ್ಥಾನಮಾನ ಪಡೆದು, ಸುಮಾರು ನಾಲ್ಕು ಶತಮಾನಗಳಿಂದಲೂ ಜನಸಾಮಾನ್ಯರ ಹೃದಯದಲ್ಲಿ ಹಚ್ಚ ಹಸಿರಾಗಿ ಉಳಿದಿದ್ದಾನೆ. ಸರ್ವಜ್ಞ ಕನ್ನಡ ಸಾಹಿತ್ಯ ಕಂಡ ಮಿಂಚಿನ ಮರಿ, ಕ್ರಾಂತಿಯ ಕಿಡಿ, ನವಸಮಾಜ ನಿರ್ಮಾಣದ ಕನಸು ಕಂಡ ಕ್ರಾಂತಿಕಾರಿ ವಚನಕಾರರ ಸಮರ್ಥ ಉತ್ತರಾಧಿಕಾರಿ. ತಾನು ಕಂಡ ಸಮಾಜ ಹೇಗಿತ್ತು ಎಂಬುದನ್ನು ವಿಡಂಬಿಸುವುದರ ಮೂಲಕ ತಾನು ಬಯಸುವ ಸಮಾಜ ಹೇಗಿರಬೇಕು ಎಂಬುದನ್ನು ಸೂಚಿಸುವುದು ಸರ್ವಜ್ಞನ ಸಾಮಾಜಿಕ ಕಳಕಳಿಗೆ ಸಾಕ್ಷಿಯಾಗಿದೆ. ಪ್ರಸ್ತುತ ಲೇಖನದಲ್ಲಿ ಲೇಖಕರು ಸರ್ವಜ್ಞನ ದೃಷ್ಟಿಯಲ್ಲಿ ಗುರು ಎಂಬ ವಿಚಾರವನ್ನು ಚಿಂತನೆ ಮಾಡಿದ್ದಾರೆ.

ಪ್ರಾಚೀನ ಭಾರತದ ಚರಿತ್ರೆಯ ಪುಟಗಳನ್ನು ಅವಲೋಕಿಸಿದಾಗ ನಮಗೆ ಗುರುವಿನ ಸ್ಥಾನಮಾನ ಮತ್ತು ಮಹತ್ವದ ಬಗ್ಗೆ ಅರಿವಾಗದೇ ಇರದು. ಗುರುವಿಗೆ ನೀಡಿದಂತಹ ಸ್ಥಾನ, ಮಾನ, ಗೌರವವನ್ನು ಭೂಮಿಯ ಮೇಲಿನ ಇನ್ನಾವುದೆ ವ್ಯಕ್ತಿಗೆ ನೀಡಲಾಗಿಲ್ಲ. ಗುರುಕುಲ ಪದ್ಧತಿಯ ಕಾಲದಲ್ಲಿ ಗುರು ದೇವರ ನಂತರದ ಸ್ಥಾನವನ್ನು ಪಡೆದಿದ್ದನು ಅಂತೆಯೇ;

> ಗುರು ಬ್ರಹ್ಮಾ ಗುರು ವಿಷ್ಣು
> ಗುರು ದೇವೋ ಮಹೇಶ್ವರ,
> ಗುರು ಸಾಕ್ಷಾತ್ ಪರಬ್ರಹ್ಮ
> ತಸ್ಮೈಶ್ರೀ ಗುರುವೇ ನಮಃ

ಎಂದು ಪ್ರಾರ್ಥಿಸಲಾಗುತ್ತಿದೆ.

ಅದ್ದರಿಂದ ಗುರುವಿನ ಸ್ಥಾನ-ಮಾನವು ಒಂದು ಸಾಮಾಜಿಕ-ಸಾಂಸ್ಕೃತಿಕ ಮಟ್ಟವನ್ನು ಪ್ರತಿಬಿಂಬಿಸುವುದು ಆದ್ದರಿಂದಲೇ ಯಾರು ಗುರುವಿಗಿಂತ ಮೇಲಟ್ಟಿಕ್ಕಿರಲು ಸಾಧ್ಯವಿಲ್ಲ ಎನ್ನುವ ಮಾತು ನಮ್ಮ ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬ರ ಕರಡು ಪ್ರತಿ ೬.೧ರಲ್ಲಿ ಉಲ್ಲೇಖಿಸಲಾಗಿದೆ.

ಗುರು ಬಹುನಾಮಧಾರಿ. ಆಚಾರ್ಯ, ಉಪಾಧ್ಯಾಯ, ಉಪನ್ಯಾಸಕ, ಬೋಧಕ, ಪ್ರಾಧ್ಯಾಪಕ, ಶಿಕ್ಷಕ, ಮಾಸ್ತರ ಹೀಗೆ ಹಲವು ನಾಮಗಳಿಂದ ಕರೆಯಲಾಗುತ್ತದೆ. ಹಾಗಾದರೆ ಗುರು ಎಂದರೆ ಯಾರು? ಎನ್ನುವ ಪ್ರಶ್ನೆಗೆ ಉತ್ತರವನ್ನು ಈ ರೀತಿ ಕೊಡಬಹುದಾಗಿದೆ. ಅಜ್ಞಾನವೆಂಬ ರೋಗವನ್ನು ಗುರುತಿಸಿ ಅದರ ಪ್ರತ್ಯಕ್ಷ ಲಕ್ಷಣಗಳಾದ ಅಲಸ್ಯ, ಸಂಕೋಚಿತತೆ, ವೃಥಾ ಕಾಲಕ್ಷೇಪ, ವ್ಯಕ್ತಿಗತ ದೋಷ ಮುಂತಾದವುಗಳನ್ನು ಜ್ಞಾನಧಾರೆಯೆಂಬ ದಿವ್ಯ ಔಷಧದ ಮೂಲಕ ವ್ಯಕ್ತಿಯನ್ನು ಮನೋಸ್ವಾಸ್ಥದ ಮೇಲಂತಸ್ತಿಗೆ ಒಯ್ಯುವವನೇ ಗುರು. ಅಂದರೆ "ದೇಹದ ರೋಗಕ್ಕೆ ವೈದ್ಯ ಮದ್ದು ಕೊಟ್ಟರೆ ಆತ್ಮದ ರೋಗಕ್ಕೆ ಮದ್ದು ಗುರು ಕೊಡುತ್ತಾನೆ" ಒಟ್ಟಾರೆ ಗುರುಗಳ ಸ್ಥಾನ ಗುರುತರವಾಗಿದೆ. ಜೊತೆಗೆ ಈತನನ್ನು "ರಾಷ್ಟ್ರ ನಿರ್ಮಾತೃ", "ಮಾನವ ನಿರ್ಮಾತೃ", "ಇತಿಹಾಸದ ನಿರ್ಮಾತೃ" ಎಂದು ಪ್ರಸಿದ್ಧರಾಗಿರುವ ಈ ಗುರುವಿನ ಬಗ್ಗೆ ಸರ್ವಜ್ಞನ ವಿಚಾರವೇನು ಎಂಬುದರ ಬಗ್ಗೆ ಇಲ್ಲಿ ವಿಶ್ಲೇಷಿಸಲಾಗಿದೆ.

ಊರಿಂಗೆ ದಾರಿಯನು। ಆರು ತೋರಿದಡೇನು।
ಪಾರಾಯದನಿಜದ ತೋರುವ ಗುರುವ್ಯೋತಾ।
ನಾರಾದಡೇನು ಸರ್ವಜ್ಞ॥

"ಊರಿಗೆ ದಾರಿ ಗೊತ್ತಿರದ ವ್ಯಕ್ತಿಗೆ ಊರಿನ ದಾರಿಯನ್ನು ಇಂಥವರೇ ತೋರಿಸಬೇಕೆಂಬ ಯಾವ ನಿಯಮವಿಲ್ಲ. ಅಂಥ ಸಮಯದಲ್ಲಿ ಯಾರು ದಾರಿ ತೋರಿದರೂ ಸರಿಯೇ, ಯಾಕೆಂದರೆ ಅವನು ಊರು ತಲುಪಿದರೆ ಸಾಕಲ್ಲವೆ? ಅದೇ ರೀತಿ ಸತ್ಯದ ಅರಿವನ್ನು ತಿಳಿಸಿಕೊಡುವಂಥ ಗುರುವು ಎಂಥವನಿದ್ದರೇನು? ಹೇಗಿದ್ದರೇನು, ಇದಾವುದನ್ನು ಪರಗಣಿಸದೇ ಜ್ಞಾನ ಸಂಪಾದನೆ ಮಾಡುವುದೇ ನಮ್ಮ ಗುರಿಯಾಗಿರಬೇಕು."

ಗುರು ಮನುಜನೆಂದಾಗೆ। ಹರನ ಶಿಲೆಯೆಂದವಂಗೆ
ಕರುಣ ಪ್ರಸಾದವನು ಎಂಜಲೆಂದವನಿಗೆ।
ನರಕ ತಪ್ಪುವುದೇ ಸರ್ವಜ್ಞ॥

"ಗುರು" ಒಬ್ಬ ವ್ಯಕ್ತಿಯಲ್ಲ; ಮಹಾನ್ ಶಕ್ತಿ ಎಂದೇ ಕರೆಯಬೇಕು. ಗುರುವನ್ನು ಅವನೊಬ್ಬ ಮನುಷ್ಯ ಎನ್ನುವವನಿಗೆ ಕಲ್ಲಿನಲ್ಲಿ ಅರಳಿದ ಮಹಾದೇವನನ್ನು ಅದೊಂದು "ಕಲ್ಲು" ಎನ್ನುವವನಿಗೆ ಮತ್ತು ಪ್ರಸಾದವನ್ನು ಎಂಜಲು ಎಂದು ಹೀಯಾಳಿಸುವಂಥ ನರರಿಗೆ ನರಕ ತಪ್ಪಲಾರದು ಎಂದು ಎಚ್ಚರಿಸಿದಾನೆ. ಆದರಿಂದ ಗುರುವನ್ನು ಗೌರವ ಭಾವದಿಂದ ಕಾಣಬೇಕು ಎಂದು ಹೇಳಿದ್ದಾನೆ. ಬಂಧುಗಳಿಗಿಂತ ಹೆಚ್ಚಿನ ಪ್ರೀತಿ ಗುರುವಿಗೆ ತೋರಿಸಬೇಕು. ಅಂತಲೇ;

ಬಂಧುಗಳು ಆದವರು। ಬಂದುಂಡು ಹೋಗುವರು।
ಬಂಧನವ ಕಳೆಯಲರಿಯರು, ಗುರುವಿಂದ
ಬಂಧುಗಳು ಉಂಟೇ ಸರ್ವಜ್ಞ॥

ನಮ್ಮ ಸಂಬಂಧಿಕರು ಅಥವಾ ನಮ್ಮ ಬಂಧು ಬಳಗದವರೆಲ್ಲ ನಮ್ಮನೆಗೆ ಬಂದು ಹೊಟ್ಟೆ ತುಂಬಾ ಊಟಮಾಡಿ ಹೋಗುವವರೇ ವಿನಃ ನಮ್ಮ ಕಷ್ಟಗಳನ್ನು ಪರಿಹರಿಸಲಾರರು. ಆದರೆ ನಮ್ಮೆಲ್ಲ ಕಷ್ಟಗಳನ್ನು ಹೊಡೆದೋಡಿಸುವಂಥ ಮಹಾನ್ ಶಕ್ತಿ ಎಂದರೆ ಗುರುವೆಂದೇ ತಿಳಿಯಬೇಕು. ಆದ್ದರಿಂದ ಬಂಧುಗಳಿಗಿಂತ ಹೆಚ್ಚಿನವನೆಂದರೆ ಗುರುವೇ ಎಂದು ಎಲ್ಲರೂ ಅರಿಯಬೇಕು. ಜೊತೆಗೆ ನಮ್ಮ ತಂದೆಗಿಂತ ಹೆಚ್ಚಿನವನೆಂದು ತಿಳಿಯಬೇಕು ಎಂದು ಹೇಳುತ್ತಾ;

ತಂದೆಗೂ ಗುರುವಿಗೂ। ಒಂದು ಅಂತರವುಂಟು
ತಂದೆ ತೋರುವನು ಸದ್ಗುರುವ, ಗುರುರಾಯ।
ಬಂದನವ ಕಳೆದೆ ಸರ್ವಜ್ಞ॥

ಎಂದು ಹೇಳಿದ್ದಾನೆ. ತಂದೆ ಯಾದವನು ಒಳ್ಳೆಯ ಗುರುವನ್ನು ತೋರಿಸುತ್ತಾನೆ ಆದರೆ ಗುರುವರ್ಯನು ನಮ್ಮ ಆತ್ಮವನ್ನು ಶುದ್ಧಿ ಮಾಡಿ, ಅಜ್ಞಾನವನ್ನು ದೂರಮಾಡಿ ಬಂಧನವನ್ನು ಕಳೆಯುವನು ಮಾತ್ರ ಗುರುವಾಗಿದ್ದಾನೆ. ಆದ್ದರಿಂದ ನೀನು ಸದಾ ಗುರುವಿನ ಅಡಿಯಾಳಾಗಿರು ಎಂದಿದ್ದಾನೆ.

ಎತ್ತಾಗಿ ತೊತ್ತಾಗಿ । ಹಿತ್ತಲದ ಗಿಡವಾಗಿ॥
ಮತ್ತೆ ಪಾದದ ಕರನಾಗಿ ಗುರುವಿನ।
ಹತ್ತಲಿರು ಎಂದು ಸರ್ವಜ್ಞ॥

ಅಂದರೆ ನರನೇ ನೀ ಸದಾ ಗುರುವಿನ ಬಳಿಯಲ್ಲಿಯೇ ಇರು. ನೀನು ಗುರುವನ್ನು ಬಿಟ್ಟು ಕದಲಬೇಡ. ಗುರುವಿನ ಪಾದ ಕಮಲಗಳಲ್ಲಿ ಆಳಾಗಿ ಇರು; ಇಲ್ಲವೇ ಕೊನೆಗೆ ಪಾದರಕ್ಷೆ ಯಾಗಿದ್ದರೂ ಪರವಾಗಿಲ್ಲ, ನೀ ಮಾತ್ರ ಅವನಲ್ಲಿ ಇದ್ದು ನಿನ್ನ ಜ್ಞಾನದಾಹವನ್ನು ನೀಗಿಸಿಕೋ ಎಂದು ಹೇಳುತ್ತಾ ಇಂತಹ ಗುರುವಿನ ಉಪದೇಶದಿಂದ ಖಂಡಿತಾ ನಿನಗೆ ಮುಕ್ತಿ ದೊರೆಯುತ್ತದೆ ಎಂಬುದನ್ನು ಈ ಕೆಳಗಿನ ತ್ರಿಪದಿಗಳಲ್ಲಿ ಹೇಳಿದ್ದಾನೆ.

ಮೊಸರು ಕಡೆಯಲು ಬೆಣ್ಣೆಯೊಸೆದು ತೋರುವ ತರದಿ।
ಹಸನಪ್ಪ ಗುರುವಿನುಪದೇಶದಿಂ ಮುಕ್ತಿ ।
ವಶವಾಗದಿಹುದೇ ಸರ್ವಜ್ಞ॥

ಈ ವಚನದ ತಾತ್ಪರ್ಯವೆನೆಂದರೆ ಮೊಸರು ಕಡೆದೊಡನೆ ಬೆಣ್ಣೆಯು ಚೆನ್ನಾಗಿ ಗೋಚರವಾಗುವಂತೆ ಒಳ್ಳೆಯ ಗುರುವಿನ ಬಳಿ ಇದ್ದು ಈತನಿಂದ ಉಪದೇಶ ಪಡೆದಿದ್ದರೆ ಖಂಡಿತಾ ಮುಕ್ತಿ ದೊರಕಿ ಈ ಭೂಮಿಯ ಮೇಲೆ ಜನಿಸಿದ್ದಕ್ಕೂ ಒಂದು ಅರ್ಥ ಬರುತ್ತದೆ ಎಂದು ತಿಳಿಹೇಳಿದ್ದಾನೆ. ಮುಂದುವರೆದಂತ ಉಜ್ವಲ ಮೂರ್ತಿಗಳು ನಿನಗೆ ಮುಕ್ತಿ ಪಡೆಯಲು ಗುರುವಿನ ಉಪದೇಶ ಪಡೆಯಲು, ಗರ್ವವನ್ನು ಬಿಡಬೇಕು ಎಂದು ಎಚ್ಚರಿಸಿದ್ದಾನೆ.

ದಾಸಭಕ್ತಿಗಳಲ್ಲಿ । ನಾನು ಮರೆದಿರಬೇಕು।
ನಾನೆಂಬ ರೋಗ ನೀಗದಗೆ ಗುರುಬೋಧೆ।
ತಾನೆ ಫಲಿಸುವುದು ಸರ್ವಜ್ಞ॥

ಗುರುವಿನ ಬಳಿಯಲ್ಲಿದ್ದಾಗ ನೀನು 'ನಾ' ಎನ್ನುವ ಅಹಂಕಾರವನ್ನು ಅಳಿಸಿರಬೇಕು. ಯಾಕೆಂದರೆ ಅಣುವಲ್ಲಿ ಅಣುವಾದಂತ ನೀನು 'ನಾ' ಮೇಲಿನವನು ನಾ, ಮಹಾಧಾನಿ, ನಾ ಮಹಾಭಕ್ತಿವಂತ ಎನ್ನುವಂತ ಅಹಂಕಾರವಿರಬಾರದು, ಈ ಗರ್ವದ ರೋಗದಿಂದ





ಪಾರಾದರೆ ಅವನಿಗೆ ಗುರುಬೋಧೆಯ ಫಲವು ತಾನಾಗಿಯೇ ದೊರೆಯುವುದು ಎನ್ನುತ್ತಾನೆ. ಸರ್ವಜ್ಞನ ಇಂತಹ ಪರಿಶುದ್ಧವಾದ ಮನುಷ್ಯನಿಗೆ ಮಾತ್ರ ಉಪದೇಶ ನೀಡಬೇಕೆ ಹೊರತು ಹೀನ ಮನದ ಮನುಷ್ಯನಿಗಲ್ಲ ಎಂದು ಮಾರ್ಮಿಕವಾಗಿ ಹೇಳಿದ್ದಾನೆ ಅಂತಲೇ;

ಶ್ವಾನ ತೆಂಗಿನಕಾಯಿ। ತಾನು ಮೆಲಬಲ್ಲುದೆ।
ಹೀನ ಮನದವರ ನಿಗುಪ್ರದೇಶ ವಿತ್ತೆಡಯ।
ಹಾನಿ ಕಾಣಯ್ಯ ಸರ್ವಜ್ಞ॥

ಈ ಮೇಲಿನ ವಚನದ ಸಾರವೇನೆಂದರೆ, ನಾಯಿಯು ತೆಂಗಿನ ಕಾಯಿಯನ್ನು ತಿನ್ನಬಲ್ಲದೇ? ಎಂದಿಗೂ ಸಾಧ್ಯವಿಲ್ಲ ಅಲ್ಲವೇ? ಅದೇ ರೀತಿ ಹೀನ ಮನದ ಮನುಷ್ಯನಿಗೆ ಜ್ಞಾನ ನೀಡಿದರೆ ಅದರಿಂದ ಹಾನಿಯೇ ಹೊರತು ಉಪಯೋಗ ವಂತೂ ಎಳ್ಳೆಷ್ಟು ಬರುವುದಿಲ್ಲ. ಆದ್ದರಿಂದ ಗುರುವಾದರು ಒಳ್ಳೆಯ ಪ್ರವೃತ್ತಿಯುಳ್ಳವರಿಗೆ ಉಪದೇಶಿಸಬೇಕೆ ವಿನಃ ಕುಲಷಿತವಾದ ಮನಸ್ಸಿನ ಮನುಷ್ಯರಿಗಲ್ಲ ಎಂಬುದು ಅರಿಯಬೇಕೆಂದು ಅರುಹಿದ್ದಾರೆ. ಮತ್ತೇ ಮುಂದುವರೆದು "ವಿಷಯ ವಾಸನೆಯುಳ್ಳ" ವ್ಯಕ್ತಿಗೆ ಗುರುವಶವಾಗುವುದಿಲ್ಲ ಎಂದಿದ್ದಾನೆ ಈ ಕೆಳಗಿನ ಸಾಲುಗಳಲ್ಲಿ;

ಹಸಿಯ ಸಮಿಧೆಯ ತಂದು । ಹೊಸೆದರುಂಟೇ ರೆಚ್ಚ।
ವಿಷಯಂಗಳುಳ್ಳ ಮನುಜಗೆ ಗುರು ಕರುಣ।
ವಶವರ್ತಿಯಹುದೇ ಸರ್ವಜ್ಞ॥

ಹಸಿಯಿರುವ ಎರಡು ಕಟ್ಟಿಗೆಯ ತುಂಡುಗಳನ್ನು ಒಂದಕ್ಕೊಂದು ತಿಕ್ಕಿದರೆ ಅಗ್ನಿ ಉತ್ಪನ್ನವಾಗ ಬಹುದೇ? ಖಂಡಿತಾ ಆಗಲಾರದು. ಅದರಂತೆಯೇ ವಿಲಾಸಿ ವಸ್ತುಗಳಿಗೆ ಮನ ಸೋತು ದುಶ್ಚಟಕ್ಕೆ ಬಲಿಯಾಗಿ ನರುಳುವಂತ ವಿಷಯ ವಾಸನೆಯುಳ್ಳ ನರನಿಗೆ ಗುರುವಿನ ಕರುಣೆ ಎಂದಿಗೂ ಕರಗತವಾಗುವುದಿಲ್ಲ; ಜೊತೆಗೆ ಇಂಥವರ ಮನಕ್ಕೆ ಉಪದೇಶ ತಲುಪಿ ಅವರು ಮನಸ್ಸು ವಿಶಾಲವಾಗುವುದೆಂತೋ ಸಾಧ್ಯವಿಲ್ಲ ಎಂದಿದ್ದಾರೆ. ಮುಂದುವರೆದ ಮಹಾನ್ ಚೈತನ್ಯ ಪುರುಷರು ಎಲ್ಲರ ಹೃದಯದಲ್ಲಿ ಆತ್ಮವಿದ್ದರೂ ಕೂಡ ಅವನಿಗೆ ಗುರುದರ್ಶನ ವಾಗಲೇಬೇಕೆಂದು ಹೇಳಿದ್ದಾರೆ, ಅಂತೆಯೇ

ಹರತನ್ನೊಳಿರ್ದು ಗುರು। ತೋರಿದರೆ ತಿಳುವುದೆ।
ಮರದೊಳಗೆ ಅಗ್ನಿ ಇರುತಿರ್ದು, ತನ್ನ ತಾ
ಸರಿಯ ಬೇಕೆಂದು ಸರ್ವಜ್ಞ॥

ಗಿಡದಲ್ಲಿ ಅಗ್ನಿಯು ಅಡಗಿದ್ದರೂ ಆ ಅಗ್ನಿಯ ಬಗ್ಗೆ ಗಿಡವು ಅರಿಯದು. ಅದೇ ರೀತಿ ಪ್ರತಿಯೊಬ್ಬರ ಮನುಷ್ಯರ ಹೃದಯದಲ್ಲಿ ಶಿವನಿದ್ದರೂ ಕೂಡ ಗುರುವಿನ ಅನುಗ್ರಹವಾಗದೇ ಅವನಿಗೆ ಶಿವನ ಬಗ್ಗೆ ತಿಳಿಯದೇ ಅವರ ಜೀವನ ವ್ಯರ್ಥವಾಗುವುದರಲ್ಲಿ ಸಂದೇಹವಿಲ್ಲ ಎಂದು ಹೇಳುತ್ತಾ ಪ್ರತಿಯೊಬ್ಬರು ಗುರುವಿನ ವಿಚಾರ ದರ್ಶನ ಮಾಡಿಕೊಂಡು ಶಿವನನ್ನು ಕಾಣಬೇಕೆಂದಿದ್ದಾನೆ ಈ ಕೆಳಗಿನ ವಚನದಲ್ಲಿ;

ಜ್ಯೋತಿಯಿಂದಲಿ ನೇತ್ರ । ರಾತ್ರಿಯೊಳು ಕಾಂಬಂತೆ।
ಸೂತ್ರದಿಂದಾತನರಿವಂತೆ ಶಿವನ ಗುರು।
ನಾಥ ನಿಂದರಿಗು ಸರ್ವಜ್ಞ॥

ಅಂದರೆ ನಾವು ರಾತ್ರಿಯಲ್ಲಿ ದೀಪದ ಸಹಾಯದಿಂದ ನಮಗೆ ಕಣ್ಣು ಕಾಣುವಂತೆ ದಾರದಿಂದ ಸೂತ್ರಧಾರಿಯನ್ನು ಗುರುತಿಸುವಂತೆ ನಾವು ಗುರುನಾಥನ ಅನುಗ್ರಹದಿಂದ ಸಾಕ್ಷಾತ್ ಶಿವನನ್ನು ಕಾಣುವೆವು ಎಂದಿದ್ದಾರೆ ಮಹಾನ್ ದಾರ್ಶನಿಕರು.

ವಿದ್ಯೆ ಕಲಿತಡೆ ಇಲ್ಲ । ಬುದ್ಧಿ ಕಲಿತಡೆ ಇಲ್ಲ ।
ಉದ್ಯೋಗ ಮಾಡಿದರೆ ಇಲ್ಲ, ಗುರು ಮುಖವೆ।
ಇದ್ದಲ್ಲದಿಲ್ಲ ಸರ್ವಜ್ಞ॥

ಇದರರ್ಥವಿಷ್ಟೇ, ನಾವು ವಿದ್ಯೆ, ಬುದ್ಧಿ ಕಲಿತು ಬುದ್ಧಿವಂತರಾದರೂ ನಾವು ಯಾವುದೇ ಕೆಲಸ ಮಾಡಿದರೂ ಕೂಡ ನಾವು ತೃಪ್ತರಲ್ಲ. ಯಾವಾಗ ಗುರುಮುಖದಿಂದ ಉಪದೇಶವಾಗುತ್ತದೆಯೋ ಅವಾಗ ಮಾತ್ರ ನಮ್ಮ ಜೀವನಕ್ಕೆ ಅರ್ಥ ಬರುತ್ತದೆ. ಇಲ್ಲದಿದ್ದರೇ ಎಲ್ಲವೂ ವ್ಯರ್ಥ ಎಂದು ಹೇಳುತ್ತಾ ಗುರುವಿನ ಮಾತುಗಳೇ ದೇವರೆಂದು ತಿಳಿಯಬೇಕೆಂದಿದ್ದಾನೆ ಈ ತ್ರಿಪದಿಯಲ್ಲಿ -

ಕಲ್ಲು ಕಲೆಂಬುವಿರಿ । ಕಲ್ಲೊಳಿಪ್ಪದೆ ದೈವ।
ಕಲ್ಲಲಿ ಕಳೆಯ ನಿಲಿಸಿದ ಗುರುವಿನ।
ಸೊಲ್ಲಲ್ಲೆ ದೈವ ಸರ್ವಜ್ಞ॥

ಎಂದು ಹೇಳಿದ್ದಾನೆ.

ಅಂದರೆ "ಜೀವನವೇ ಒಂದು ಪ್ರಕೃತಿ. ಕೆತ್ತಿದರೆ ಆಕೃತಿ ಪೂಜಿಸಿದರೆ ಸಂಸ್ಕೃತಿ - ಈ ತತ್ವವನ್ನು ತಿಳಿದುಕೊಂಡು ಕಲ್ಲಿನಲ್ಲಿ ದೇವನಿರುವನೇ? ಎಂದು ಪ್ರಶ್ನಿಸದೇ ಅಂಥ ಕಲ್ಲಿನಲ್ಲೆ ದೇವರನ್ನು ತಂದು ನಿಲ್ಲಿಸಿದ ಗುರುವಿನ ಅನುಗ್ರಹ ಪೂರ್ಣವಾದ ಮಾತುಗಳನ್ನು ದೇವರೆಂದು ತಿಳಿಯಬೇಕು ಎಂದು ತಿಳಿಸುತ್ತಾ ಗುರುವಿನ ಮಹತ್ವವನ್ನು ಇನ್ನಷ್ಟು ವಿಶಾಲವಾಗಿ ವಿಚಾರ ಮಾಡಿದ್ದಾನೆ:

ಗುರು ಇಲ್ಲದ ಮಠವು । ಹಿರಿಯರಿಲ್ಲದ ಮನೆಯು॥
ಅರಸಿಲ್ಲ ದೂರು ಇವು ಮೂರು ನೂಲಿಹರಿದ ॥
ಹೊರಸಿನಂತಿಕ್ಕು ಸರ್ವಜ್ಞ॥

ಅಂದರೆ ಗುರುವಿಲ್ಲದ ಮಠವು, ಯಜಮಾನನಿಲ್ಲದ ಮನೆ, ಅರಸನಿಲ್ಲದ ಊರು ಇವು ಮೂರು ನೂಲಿನ ಹಗ್ಗಗಳು ಹರಿದು ಹೋದ ಹೊರಸು ಹೇಗೆ ನಿಷ್ಪ್ರಯೋಜಕವೋ ಹಾಗೆಯೇ ಆಗುತ್ತವೆ ಎಂದಿದ್ದಾನೆ. ಇಂಥ ಉನ್ನತ ಸ್ಥಾನದಲ್ಲಿರುವ ಗುರು "ಜ್ಞಾನಸಂಪಾದನೆ" ಮಾಡಿಕೊಳ್ಳುವುದು ಮುಖ್ಯ ಕರ್ತವ್ಯವೆಂದು ಗುರುವಿಗೆ ಉಪದೇಶ ಮಾಡಿದ್ದಾನೆ;

ಹಂದಿ ಚಂದನದ । ಸುಗಂಧವನುಬಲ್ಲುದೆ॥
ಒಂದನು ತಿಳಿಯಲರಿಯದ ಗುರುವಿಂಗೆ ।
ನಿಂದೆಯೇ ಬಹುದು ಸರ್ವಜ್ಞ॥

ಗುರು ಎಂದೆನಿಸಿಕೊಂಡವನು ಜ್ಞಾನ ಸಂಪಾದನೆ ಮಾಡಿಕೊಂಡಿರಬೇಕು. ಇಲ್ಲದಿದ್ದರೆ ಆತನು ಅಪಕೀರ್ತಿಗೆ ಒಳಗಾಗುತ್ತಾನೆ. ಯಾಕೆಂದರೆ ಯಾವ ರೀತಿ ಹಂದಿಯಂಥ ಕ್ಷುದ್ರ ಪ್ರಾಣಿಯು ಸುಗುಂಧದ ಪರಿಮಳವನ್ನು ಅರಿಯ ಲಾರದೋ ಹಾಗೆಯೇ ಪರಮ ಜ್ಞಾನವನ್ನು ಅರಿಯದಂಥ ಸದ್ಗುರುವು ಜನರ ನಿಂದೆಗೆ ಒಳಗಾಗಬೇಕಾಗುತ್ತದೆ ಎಂದು ಒತ್ತಿ ಹೇಳಿದ್ದಾನೆ.

ಈ ಮೇಲೆ ತಿಳಿಸಿದ ಸರ್ವಜ್ಞನ ರಚನೆಗಳನ್ನು ಅರಿತು ಕೊಂಡು ಗುರುವಿನ ಮಹತ್ವವನ್ನು ಇಂದಿನ ಸಮಾಜ ಅರ್ಥಿಯಬೇಕಾಗಿದೆ. ಯಾಕೆಂದರೆ ಜ್ಞಾನದಂತಹ ಪವಿತ್ರ ವಸ್ತು ಬೇರೊಂದಿಲ್ಲ. ಎಲ್ಲವನ್ನರಿತರೂ ತನ್ನ ತಾನರಿವತನಕ ಭವ ಬಂಧನ ಹರಿಯದು. ಅಂತಹ ಒಳಗಣ್ಣನ್ನು ತೆರೆಯಿಸುವ ಪವಿತ್ರ ಕಾರ್ಯ ಗುರುವಿನಿಂದ ಮಾತ್ರ ಸಾಧ್ಯ. ಯಾಕೆಂದರೆ ಗುರುವಿನ ವೃತ್ತಿ ಪವಿತ್ರತಮ ಪೂರ್ವ ಜನ್ಮಸುಕೃತದ ಪುಣ್ಯವಿಶೇಷದಿಂದ ಗುರುವಾಗುತ್ತಾನೆ.

ಆದ್ದರಿಂದ ಗುರುವಾದರೂ ಸಹ ಸದಾ ಕಲಿಯುತ್ತಾ ಇರಬೇಕು. ಜೊತೆಗೆ ಗುರುವೃತ್ತಿಯ ಬಗ್ಗೆ ಗೌರವ ಆದರ ಹೊಂದಿರಬೇಕು. ಜ್ಞಾನ ನೀಡುವುದು ಕೇವಲ ಹೊಟ್ಟೆ ಹೊರೆದು ಕೊಳ್ಳುವ ವೃತ್ತಿ ಎಂದು ಅವನು ಭಾವಿಸಬಾರದು. ಅದು ಒಂದು ಉದಾತ್ತ ಮಾನವೀಯ ಮೌಲ್ಯಗಳಿಂದ ಕೂಡಿದ ಶ್ರೇಷ್ಠ ಕಾಯಕ ಎಂದು ತಿಳಿಯಬೇಕು. ಜೊತೆಗೆ ಎಲ್ಲಾ ಜನರು ಗುರುವಿನ ಗುರುತರವಾದ ಜವಾಬ್ದಾರಿಯ ಬಗ್ಗೆ ಅರಿಯಬೇಕು ಎಂಬುದನ್ನು ಈ ಕೆಳಗಿನ ವಚನದಲ್ಲಿ ವ್ಯಕ್ತಪಡಿಸಿದ್ದಾನೆ.

ಉರಿಯದಕ ಮಾರುತವು । ಉರಗ ಹರಿನಾಗರವು
ಗುರುವಾಜ್ಞೆ ಗಂಜಿ ನಿಲುವುವು. ಇದರ ಸರ॥
ರರಿಯದಲೆ ಕೆಡಗು ಸರ್ವಜ್ಞ॥

ಗುರು ಆಜ್ಞಾಪಿಸಿದರೆ ಕುದಿಯುತ್ತಿರುವ ನೀರು ತಣ್ಣಗಾಗುತ್ತದೆ, ಬಿರುಗಾಳಿಯು ನಿಲ್ಲುತ್ತದೆ. ಹೋಗುತ್ತಿರುವ ಘಟಸರ್ಪವು ನಿಂತು ಬಿಡುವುದು. ಇಂಥ ಮಹಾತ್ಮನನ್ನರಿಯದೇ ಜನರು ಕೆಟ್ಟು ಹೋಗುತ್ತಿದ್ದಾರೆ ಎಂದು ದುಃಖಿತನಾಗಿ ಹೇಳಿದ್ದಾನೆ. ಕೊನೆಯಲ್ಲಿ ತಿಳಿಸುವುದೇನೆಂದರೆ; ಸದಾ ಕಲಿಯುತ್ತ ಹೋಗುವ ಮನೋಧರ್ಮವಿಲ್ಲದ ಗುರು ನಿಜವಾಗಿ ಏನನ್ನು ಕಲಿಸಲಾರ, ತನ್ನಲ್ಲಿ ಜ್ವಾಲೆ ಇಲ್ಲದ ಯಾವ ದೀಪವೂ ಬೇರೊಂದು ದೀಪವನ್ನು ಬೆಳಗಲಾರದು ಎಂಬ ರವೀಂದ್ರನಾಥ ಠಾಕೂರ್‌ರವರ ಸಂದೇಶವನ್ನು ಅರ್ಥಮಾಡಿಕೊಂಡು ಗುರುವಾದವನು ಜ್ಞಾನ ಭಂಡಾರವನ್ನು ಸಮಾಜದೊಡನೆ ಬಾಳ್ವೆ ಬಾಳಬೇಕಾಗಿದೆ.

## ಗಂಟಲು ಬೇನೆ

ದೇಹದ ಉಷ್ಣದಿಂದ ಹೆಚ್ಚಾಗಿ ಸಂಭವಿಸುವ ಬಾಯಿಯಲ್ಲಾಗುವ ಬಕ್ಕೆಗಳಿಗೆ, ಗಂಟಲಿನಲ್ಲಾಗುವ ಬೇನೆಗೆ ಹಾಗೂ ಹೊಟ್ಟೆ ನೋಯುವವರಿಗೆ ಅತೀ ಸರಳವಾಗಿ ಹೋಗಲಾಡಿಸಲು ನೀರಿನಲ್ಲಿ ನಿಂಬೆಹಣ್ಣಿನರಸ ಹಾಗೂ ಜೇನು ತುಪ್ಪವನ್ನು ಬೆರೆಸಿ ಕುಡಿಯಬೇಕು. ಒಂದು ವೇಳೆ ದೇಹದ ಉಷ್ಣತೆ ಹೆಚ್ಚುವುದರಿಂದ ಸಂಭವಿಸುವ ಒಣ ಕೆಮ್ಮಿಗೆ ಒಂದು ಕಪ್ಪು ಬಿಸಿ ನೀರಿನಲ್ಲಿ ಅರ್ಧ ಚಮಚೆ ಜೀರಿಗೆಯನ್ನು ಸೇರಿಸಿ ಅದಕ್ಕೆ ಸ್ವಲ್ಪ ಜೇನುತುಪ್ಪ ಬೆರೆಸಿ ಕೆಲವೊಂದು ದಿನಗಳವರೆಗೆ ಪ್ರತಿನಿತ್ಯ ಸೇವಿಸಬೇಕು.

**ಧ್ವನಿ ಒಡೆಯುವಿಕೆಗೆ** - ಒಂದು ಕಪ್ಪು ಬಿಸಿ ನೀರಿನಲ್ಲಿ ಅರ್ಧ ಚಮಚೆ ಜೀರಿಗೆ ಪುಡಿಯನ್ನು ಬೆರೆಸಿ ಅದಕ್ಕೆ ಪುಡಿ ಮಾಡಿದ ಮೂರು ಏಲಕ್ಕಿಗಳನ್ನು ಹಾಗೂ ಪುಡಿಮಾಡಿದ ಒಂದು ಲವಂಗವನ್ನು ಸೇರಿಸಿ ಎರಡು ನಿಮಿಷ ಹಾಗೆಯೇ ಇಡಬೇಕು. ಅನಂತರ ಅದನ್ನು ಚೆನ್ನಾಗಿ ಕಲುಕಿ ಅದಕ್ಕೆ ಒಂದು ಚಮಚೆ ಜೇನು ತುಪ್ಪ ಬೆರೆಸಿ, ದಿನಕ್ಕೆ ಮೂರು ಸಲ ಸೇವಿಸಬೇಕು.





# ದಾಸೋಹಂ

-- ಶಕುಂತಲಾ ಭೂಸನೂರಮಠ

**ಶರಣರಲ್ಲಿ "ದಾಸೋಹ" ಶಬ್ದಕ್ಕೆ ಬಹಳ ಮಹತ್ವವಿದೆ. "ದಾಸೋಹಂ", ಯಾವುದೇ ಸೇವೆ ಇಲ್ಲವೆ, ಕಾರ್ಯ ಮಾಡಿದರೂ, ಕಿಂಕರ ಭಾವದಿಂದ ಮಾಡಬೇಕು ಎಂಬುದನ್ನು ಪ್ರಸಕ್ತ ಲೇಖನದಲ್ಲಿ ವಿಚಾರ ಮಾಡಲಾಗಿದೆ.**

"ದೇಹ ಭಾವೇನ ದಾಸೋಹಂ, ಜೀವ ಭಾವೇನ ತ್ವದಂಶಕಃ ।
ಆತ್ಮಭಾವೇನ ತ್ವಮೇವಾಹಂ, ಯಥೇಚ್ಛಸಿ ತಥಾಕುರು ॥"

ಭಕ್ತಶ್ರೇಷ್ಠ ಹನುಮಂತನು ತನ್ನ ಆರಾಧ್ಯ ರಾಮನಿಗೆ ಹೇಳಿದ ಮಾತಿದು. ದೇಹದ ದೃಷ್ಟಿಯಲ್ಲಿ, ನಾನು ನಿನ್ನ ದಾಸ; ಜೀವದ ದೃಷ್ಟಿಯಲ್ಲಿ, ನಾನು ನಿನ್ನ ಅಂಶ; ಆತ್ಮದ ದೃಷ್ಟಿಯಲ್ಲಿ ನೀನೇ ನಾನು; ಆದರೂ, ನಿನ್ನಿಚ್ಛೆಯಂತೆಯೇ ಮಾಡು, ಎಂದಿದರರ್ಥ. ಇಲ್ಲಿ, ವಿನಯದ ಪರಾಕಾಷ್ಠೆಯಿದೆ; "ದಾಸೋಹಂ" ಭಾವವಿದೆ; ಅಹಂವಿದೂರತೆ ಇದೆ.

"ನಾನು" ಎಂಬುದು ಹುಟ್ಟಿನಿಂದಲೇ ಅಂಟಿಕೊಂಡು ಬಂದ ವಿಕಾರ. ಈ ಅಹಂಭಾವದಿಂದ ಅನೇಕರು ಮಣ್ಣು ಮುಕ್ಕಿದರು. ಪುರಾಣಕಾಲದ ರಾವಣನಿಂದ ಹಿಡಿದು, ಇಂದಿನ ಯಂತ್ರಯುಗದ ಮಾನವನವರೆಗೆ, ಎಷ್ಟೋ ಉದಾಹರಣೆಗಳು ನಮ್ಮಮುಂದಿವೆ. "ನಮ್ಮಲ್ಲಿ ಸ್ವರ್ಗಕ್ಕೆ ಯಾರು ಹೋಗಬಹುದು?" ಎಂದು ಒಮ್ಮೆ ಕನಕದಾಸರ ಗುರುಗಳು ತಮ್ಮ ಶಿಷ್ಯರನ್ನು ಕೇಳಿದರಂತೆ. ಎಲ್ಲರೂ "ನೀವೇ ಗುರುಗಳೇ" ಎಂದರಂತೆ. ಕನಕದಾಸರು ಮಾತ್ರ, "ನಾನು ಹೋದರೆ ಹೋಗಬಹುದು" ಎನ್ನಲು, ಉಳಿದ ಶಿಷ್ಯರು " ನೋಡಿದಿರಾ ಎಂಥ ಸೊಕ್ಕು ಇವನಿಗೆ!" ಎಂದುಕೊಂಡರು. ಆದರೆ ಗುರುಗಳು ವಿವರಿಸಿ ಹೇಳಿದರಂತೆ - "ನಾನು" ಎಂಬ ಭಾವ ಮುಗಿದರೆ ಮಾತ್ರ ಸ್ವರ್ಗಕ್ಕೆ ಹೋಗಬಹುದು".

ಸಾಧಾರಣವಾಗಿ, ನಾವೆಲ್ಲ ಒಂದು ಸಣ್ಣ ಕೆಲಸ ಮಾಡಿರೂ, ನಾನು ಮಾಡಿದೆನೆಂದೂ, ನನ್ನಿಂದಲೇ ಅದು ಸಾಧ್ಯವಾಯಿತೆಂದೂ ಹೆಮ್ಮೆಪಡುತ್ತೇವೆ. ಈ ದುರಹಂಕಾರವೇ ನಮ್ಮನ್ನು ನಾಶಗೊಳಿಸುವದು.

ದೊಡ್ಡವರು ಹೇಳುತ್ತಾರೆ - ಬಲಗೈ ಕೊಟ್ಟಿದ್ದು, ಎಡಗೈಗೂ ತಿಳಿದು ಬಾರದಂತೆ. ಅಂದರೆ, ನಾನು ಕೊಟ್ಟು ದೊಡ್ಡವನಾದೆನೆಂಬ ಗರ್ವ ಇರಬಾರದು. ದಾನ-ಧರ್ಮ ಮಾಡಿ ಮರೆತು ಬಿಡಬೇಕು. "ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ, ಕೊಟ್ಟು ಕೆಟ್ಟೆನೆನಬೇಡ" ಎಂದು ಸರ್ವಜ್ಞ ಕವಿ ಸರಳವಾಗಿ ತಿಳಿಸಿ ಹೇಳಿದ್ದಾನೆ. ಇಲ್ಲಿ ಸಂಗ್ರಹ ಬುದ್ಧಿಯ ಖಂಡನೆ ಮಾಡುತ್ತ ಇದ್ದುದನ್ನು ಹಂಚಿಕೊಳ್ಳುವ ಉದಾತ್ತ ಭಾವನೆ ಪ್ರತಿಪಾದಿಸಲ್ಪಟ್ಟಿದೆ. ಕೊಡುವಾಗ, "ನಾನು - ದಾನಿ, ಅವನು- ದೀನ" ಎಂಬ ವಿಚಾರವಂತೂ ಬರಲೇಕೂಡದು. ಒಳ್ಳೆಯ ಕಾರ್ಯವನ್ನು "ಕರ್ತವ್ಯ" ಎಂದುಕೊಂಡು ಮಾಡಬೇಕು. ಬಸವಣ್ಣನವರ ಮಾತಿನಲ್ಲಿ ಹೇಳುವುದಾದರೆ-

"ಮಾಡುವಾತ ನಾನಲ್ಲ, ನೀಡುವಾತ ನಾನಲ್ಲ, ಬೇಡುವಾತ ನಾನಲ್ಲ.... ನಿಮ್ಮಕಾರುಣ್ಯವಲ್ಲದೆ ಎಲೆ ದೇವಾ". ಈ ರೀತಿಯಾಗಿ ದೇವರಲ್ಲಿ ವಿಶ್ವಾಸವಿಟ್ಟು, ಸತ್ಕಾರ್ಯ, ಸದ್ಧರ್ಮಗಳ ದಾರಿಯಲ್ಲಿ ಮುನ್ನಡೆದರೆ, "ಕಾಯಕವೇ ಕೈಲಾಸ" ಎಂಬ ತತ್ವವನ್ನು ಎಲ್ಲರೂ ಶ್ರದ್ಧೆಯಿಂದ ಪಾಲಿಸಿದರೆ, ಬಡತನ, ದಾರಿದ್ರ್ಯ, ವೈಮನಸ್ಯ ಹಾಗೂ ಜಗಳಗಳೇ ಇಲ್ಲದಂತಾಗುವವು; ಸ್ವರ್ಗ ಭೂಮಿಗಿಳಿಯುವುದು.

"ಎನಗಿಂತ ಕಿರಿಯರಿಲ್ಲ" ಎಂಬ ಕಿಂಕರತೆಯಿಂದ ನಾವು, ಏನನ್ನಾದರೂ ಅರಿಯಬಹುದು, ಏನನ್ನಾದರೂ ಸಾಧಿಸಬಹುದು. ಇದರಿಂದಲೇ ಆತ್ಮತೃಪ್ತಿಯೆಂಬ ಸಿರಿ-ಸಂಪತ್ತು ಸಿಗುವದು.



## ಶ್ರೀ ಮಠದಲ್ಲಿ ಗಣೇಶನ ಹಬ್ಬದಲ್ಲಿ ಕಡುಬಿನ ಸಿದ್ಧತೆ : ಒಂದು ನೋಟ





ಕಡುಬಿನ ಸಿದ್ಧತೆಯಲ್ಲಿ ನಿರತರಾದ ಕಿರಿಯ ಶ್ರೀಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು







ನಿಗೆ ಪ್ರಿಯವಾದ ಕಾಯಿ ಕಡುಬಿನ ರಾಶಿ

ಕಾಯಾಲು ತಯಾರಿಕೆ













ಪ್ರಸಾದ ವಿತರಿಸಲು ಸಿದ್ಧತೆ





ಅನ್ನವನ್ನು ಬಸಿಯುತ್ತಿರುವುದು



ಸೂಸಲು ಪುಡಿ ತಯಾರಿಕೆ

## ಪರಮ ಪೂಜ್ಯ ಶ್ರೀಗಳವರು ಭಾಗವಹಿಸಿದ ಸಭೆ-ಸಮಾರಂಭಗಳು : ಸಂಕ್ಷಿಪ್ತ ವರದಿ

### ತುಮಕೂರಿನಲ್ಲಿ ಶ್ರೀ ಸಿದ್ಧಿವಿನಾಯಕ ಮಹೋತ್ಸವ ಉದ್ಘಾಟನೆ



ಪರಮಪೂಜ್ಯ ಶ್ರೀಶ್ರೀಗಳವರು ಗಣೇಶೋತ್ಸವವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಂಸತ್ ಸದಸ್ಯ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಬಿ. ಸತ್ಯನಾರಾಯಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

'ಜನಪ್ರತಿನಿಧಿಗಳು ಮತ್ತು ಅಧಿಕಾರಿಗಳು ಇಂದು ದಕ್ಷತೆ, ಪ್ರಾಮಾಣಿಕತೆ, ನಿಷ್ಠೆ ಮತ್ತು ಸಮರ್ಪಕವಾಗಿ ಕೆಲಸ ಮಾಡುತ್ತಿಲವಾದ್ದರಿಂದಲೇ ದೇಶ ಇಂದು ಶೋಚನೀಯ ಸ್ಥಿತಿ ತಲುಪವಂತಾಗಿದೆ" ಎಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ವಿಷಾಧ ವ್ಯಕ್ತ ಪಡಿಸಿದರು.

ಅವರು ತುಮಕೂರಿನ ವಿನಾಯಕ ನಗರದ ಶ್ರೀ ಸಿದ್ಧಿವಿನಾಯಕ ಸೇವಾ ಮಂಡಳಿ ಆಶ್ರಯದಲ್ಲಿ ಆಗಸ್ಟ್ ೨೫ರ ಸಂಜೆ ಪ್ರತಿಷ್ಠಾಪನೆಗೊಂಡ ಸಿದ್ಧಿವಿನಾಯಕ ಮಹೋತ್ಸವ ಸಮಾರಂಭವನ್ನು ಉದ್ಘಾಟಿಸಿ ಅವರು ಆಶೀರ್ವಚನ ನೀಡಿದರು.

"ನಮ್ಮ ದೇಶದ ಸಂಸ್ಕೃತಿ ಪರಂಪರೆ ಒಣ ವೇದಾಂತವಲ್ಲ. ಕ್ಷುಲ್ಲಕ ಕಾರಣಗಳನ್ನು ಭಿನ್ನಾಭಿಪ್ರಾಯಗಳನ್ನು ಮರೆತು ಇಂದು ಎಲ್ಲರೂ ಒಗ್ಗಟ್ಟಾಗಿ ಕೆಲಸ ಮಾಡಬೇಕಾದ ಅನಿವಾರ್ಯತೆಯನ್ನು" ಅವರು ಒತ್ತಿ ಹೇಳಿದರು.

"ಭಾರತದ ಉದ್ಧಾರ ಹಳ್ಳಿಗಳ ಉದ್ದಾರದಿಂದ ಸಾಧ್ಯ ಎಂದು ಬರೀ ಭಾಷಣ ಮಾಡಲಾಗುತ್ತಿದೆ. ಅದು ಕಾರ್ಯರೂಪಕ್ಕೂ ಬರುತ್ತಿಲ್ಲ. ಈ ಸಂದರ್ಭದಲ್ಲಿ ಜನರೇ ಆತ್ಮ ವಿಮರ್ಶೆ





ಮಾಡಿಕೊಳ್ಳಬೇಕಾಗಿದೆ. ಜಪಾನ್ ದೇಶದ ಹಿರೋಷಿಮ ಮತ್ತು ನಾಗಸಾಕಿ ಪ್ರದೇಶಗಳಲ್ಲಿ ಬಾಂಬ್ ಬಿದ್ದು, ಇಡೀ ರಾಷ್ಟ್ರವೇ ಸರ್ವನಾಶವಾಗಿದ್ದಾಗ ಅದು ಮತ್ತೆ ವಿಶ್ವಮಟ್ಟದ ರಾಷ್ಟ್ರಗಳ ಸಾಲಿನಲ್ಲಿ ಸ್ಥಾನ ಪಡೆಯಲು ಅವರಲ್ಲಿದ್ದ ದೇಶ ಭಕ್ತಿ ಮತ್ತು ಕಾಯಕನಿಷ್ಠೆಗಳೇ ಕಾರಣ. ಇಡೀ ವಿಶ್ವಕ್ಕೆ ಶಾಂತಿಯ ಮಂತ್ರವನ್ನು ನೀಡಿದ ಭಾರತವೇ ವಿಶ್ವಮಟ್ಟದಲ್ಲಿ ಎಲ್ಲ ರಾಷ್ಟ್ರಗಳಿಗೆ ಮಾರ್ಗದರ್ಶನ ನೀಡುವ ಕಾಲ ಅನಿವಾರ್ಯವಾಗುತ್ತಿದೆ. ಶಾಂತಿ, ಸಹನೆ,ಸೌಹಾರ್ದತೆಯನ್ನು ಈ ದೇಶವೇ ವಿಶ್ವದ ಎಲ್ಲಾ ರಾಷ್ಟ್ರಗಳಿಗೆ ನೀಡಬೇಕಾಗಿದೆ" ಎಂದು ತಿಳಿಸಿದರು.

ಬಾಲಗಂಗಾಧರ ತಿಲಕರು ಮಹಾರಾಷ್ಟ್ರದಲ್ಲಿ ಗಣಪತಿಯ ಪೂಜೆಯನ್ನು ಪ್ರಾರಂಭಿಸಿ ಆ ಮೂಲಕ ಸಮಾಜ ಸಂಘಟನೆ, ರಾಷ್ಟ್ರ ಪ್ರೇಮದ ಸಂಕಲ್ಪಕ್ಕೆ ಪಣತೊಟ್ಟರು. ಗುಲಾಮಗಿರಿಯಲ್ಲಿದ್ದ ಈ ರಾಷ್ಟ್ರವನ್ನು ಸ್ವತಂತ್ರ ಭಾರತವನ್ನಾಗಿ ಮಾಡಲು ಅವರು ಶ್ರಮಿಸಿದರೆಂದು ಪ್ರಶಂಶಿಸಿದರು. ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಬಿ. ಸತ್ಯನಾರಾಯಣ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಸಮಾರಂಭದಲ್ಲಿ ಲೋಕಸಭಾ ಸದಸ್ಯ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶಾಸಕ ಶ್ರೀ ಎಸ್. ಶಿವಣ್ಣ, ಬೆಂಗಳೂರು ದೂರದರ್ಶನ ಕೇಂದ್ರ ನಿರ್ದೇಶಕರಾದ ಶ್ರೀ ಪಳನಿಸ್ವಾಮಿ, ಜಿಲ್ಲಾಧಿಕಾರಿ ಕೆ. ಹೆಚ್. ಗೋಪಾಲಕೃಷ್ಣೇಗೌಡ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಂ. ವಿ. ಮೂರ್ತಿ, ಕೆ. ಇ. ಬಿ. ಅಧೀಕ್ಷಕ ಅಭಯಂತರ ಶ್ರೀ ಜಿ. ಎಸ್. ಮಂಜುನಾಥ್, ಸಮಿತಿಯ ಪದಾಧಿಕಾರಿಗಳಾದ ಶ್ರೀ ಬಿ. ಎಸ್.ಶೇಖರಪ್ಪ, ಮತ್ತಿತರ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಟಿ.ಎಚ್.ಆನಂದರಾಮು ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಶ್ರೀ ಎನ್. ಆರ್. ಜಗದೀಶ್ ಅವರು ಸ್ವಾಗತಿಸಿದರು. ನಿರ್ದೇಶಕ ಶ್ರೀ ಜಯಕುಮಾರ ಗುಪ್ತ ಅವರು ವರದಿ ವಾಚನ ಮಾಡಿದರು. ಶ್ರೀ ರಾಘವೇಂದ್ರರಾವ್ ಅವರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ಕೆ. ನರಸಿಂಹ ಮೂರ್ತಿ ಅವರು ವಂದಿಸಿದರು.



ಇತ್ತೀಚೆಗೆ ತುಮಕೂರಿನಲ್ಲಿ ಎಲ್.ಆರ್ ಆಗ್ರೋ ಫುಡ್ಸ್ (ಪ್ರೈ.) ಲಿ., ಘಟಕವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.



ಸಿದ್ಧಗಂಗಾ ಬಡಾವಣೆಯಲ್ಲಿರುವ ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿ ಆಗಸ್ಟ್ ೧೩ರಂದು ನಡೆದ ಪರಮ ಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಕಾರ್ಯಕ್ರಮದಲ್ಲಿ ಶ್ರೀ ಶ್ರೀಗಳವರೊಂದಿಗೆ ಬ್ಯಾಂಕಿನ ಸಿಬ್ಬಂದಿ ವರ್ಗದವರು.



ಬೆಂಗಳೂರಿನ ಗುರುವಣ್ಣ ದೇವರ ಮಠದಲ್ಲಿ ಜುಲೈ ೧೯ರಂದು ನಡೆದ ಶ್ರೀ ಬಸವ ಜಯಂತಿ ಮಹೋತ್ಸವದಲ್ಲಿ "ಬೆಂಗಳೂರು ನಗರ ವೀರಶೈವ ಮಠಗಳು" ಕುರಿತು ಬರೆದ ಪ್ರೌಢ ಪ್ರಬಂಧಕ್ಕಾಗಿ ಡಾಕ್ಟರೇಟ್ ಪದವಿ ಪಡೆದ ಶ್ರೀ ಬಿ. ಸಿ. ವೀರಪ್ಪ ಅವರನ್ನು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಶೀರ್ವದಿಸುತ್ತಿರುವುದು





# ಮಂಗಳಕರ ಜೀವನಕ್ಕೆ ನಾಂದಿ ಹಾಡಿದ ಶರಣರು

'ಶರಣರ ವಚನಗಳು ಸತ್ಸಂಗದ ವಾತಾವರಣ ಮೂಡಿಸುವಂತಿದ್ದು ಆ ಮೂಲಕ ಶರಣರು ಸಮಾಜದ ಮಂಗಳಕರವಾದ ಜೀವನಕ್ಕೆ ನಾಂದಿ ಹಾಡಿದವರೆಂದು" ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಅಭಿಪ್ರಾಯಪಟ್ಟರು. ಅವರು ಇತ್ತೀಚೆಗೆ ಬೆಟ್ಟದಹಳ್ಳಿ ಗವಿಮಠದಲ್ಲಿ ಏರ್ಪಡಿಸಿದ್ದ ಗ್ರಾಮಾಂತರ ಬಸವ ಜಯಂತಿ ಮಹೋತ್ಸವ ಹಾಗೂ ಶ್ರೀ ಸಿದ್ಧರಾಮೇಶ್ವರ ಸ್ವಾಮಿ ವಿದ್ಯಾರ್ಥಿ ನಿಲಯದ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡುತ್ತಿದ್ದರು.

"ಬಸವಾದಿ ಪ್ರಮಥರು ಕಾಯಕ ಮತ್ತು ದಾಸೋಹ ತತ್ವದ ಆಧಾರದ ಮೇಲೆ ಜನ ಸಾಮಾನ್ಯರ ಮನೆ ಬಾಗಿಲಿಗೆ ಮಾನವೀಯತೆಯನ್ನು ಕೊಂಡೊಯ್ದ ಮಹಾಪುರುಷರೆಂದು" ಸ್ವಾಮೀಜಿ ತಿಳಿಸಿದರು.

ಗ್ರಾಮೀಣಾಭಿವೃದ್ಧಿ ಮತ್ತು ಮತ್ತು ಪಂಚಾಯತ್ ರಾಜ್ ಸಚಿವ ಶ್ರೀ ಎಂ. ಪಿ. ಪ್ರಕಾಶ್ ಅವರು ಸಮಾರೋಪ ಭಾಷಣದಲ್ಲಿ "ದುಡಿಯದೇ ಉಣ್ಣುವುದು ಅಪರಾಧವೆಂದು ವಚನಕಾರರು ಭಾವಿಸಿದ್ದರು" ಎಂದರು. ಬಸವಣ್ಣನವರಿಗಿಂತ ಮುಂಚೆ ಬೌದ್ಧ ಧರ್ಮದ ಸ್ಥಾಪಕ ಬುದ್ಧನ ಸಂದೇಶವು ತ್ಯಾಗದ ಪರಿಕಲ್ಪನೆಯಲ್ಲಿದ್ದು ಜಾತ್ಯಾತೀತ ಸಂಘ ಜೀವನವನ್ನು ನಿರೂಪಿಸಿದನು. ಹಾಗಾಗಿ ಬುದ್ಧ ಮತ್ತು ಬಸವಣ್ಣನವರಲ್ಲಿ ಸಮಾನ ಭಾವನೆಗಳು ಮೂಡಿ ಬಂದವು. ಕ್ರಿಶ್ಚಿಯನ್ ಧರ್ಮ ಬೋಧಿಸಿದ ಪ್ರೀತಿಯೂ ಇದೇ ಅರ್ಥದಲ್ಲಿ ಮುಂದುವರಿದಿತ್ತು. ಹಾಗೆಯೇ ವಚನಕಾರರ ಶರಣ ಸತಿ, ಲಿಂಗಪತಿ ಭಾವನೆಯು ಧರ್ಮದ ತಳಹದಿಯಾಗಿತ್ತು. ಇದೇ ಹಿನ್ನೆಲೆಯಲ್ಲಿ ಡಾ. ಬಿ. ಆರ್. ಅಂಬೇಡ್ಕರ್ ಅವರು ಸಂವಿಧಾನ ರಚನೆಯಲ್ಲಿ ತೊಡಗಿದರೆಂದು ತಿಳಿಸಿದರು.

ಮುಖ್ಯ ಅತಿಥಿಯಾಗಿ ಬೆಂಗಳೂರು ಮಹಾಪೌರ ಶ್ರೀ ಜೆ. ಹುಚ್ಚಪ್ಪ ಮಾತನಾಡಿ 'ಬಸವಣ್ಣನವರ ಧರ್ಮ ಮಾನವೀಯ ಧರ್ಮ'ವೆಂದು ತಿಳಿಸಿದರು.

ಕಾರ್ಮಿಕ ಸಚಿವ ಶ್ರೀ ಬಿ.ಸತ್ಯನಾರಾಯಣ ಅವರು "ಬಸವಣ್ಣನವರ ಪರಂಪರೆಯಲ್ಲಿ ಮುಂದುವರೆದಿರುವ ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರಿಂದ ತ್ರಿವಿಧ ದಾಸೋಹವು ಮುಂದುವರಿದಿದೆ" ಎಂದು ತಿಳಿಸಿದರು.

ನಿವೃತ್ತ ಕನ್ನಡ ಪ್ರಾಧ್ಯಾಪಕ ಶ್ರೀ ಹೆಚ್. ವಿ. ವೀರಭದ್ರಯ್ಯನವರು "ಜನಪದ ಸಾಹಿತ್ಯದಲ್ಲಿ ಬಸವಣ್ಣನವರು", ಗುಲ್ಬರ್ಗಾ ವಿಶ್ವವಿದ್ಯಾಲಯದ ಬಸವಪೀಠದ ಅಧ್ಯಕ್ಷ ಡಾ. ಜಿ.ಎಸ್. ಸಿದ್ಧಲಿಂಗಯ್ಯನವರು "ವಚನ ಚಳುವಳಿ ಮತ್ತು ವಚನ ಸಾಹಿತ್ಯ" ಎಂಬ ವಿಷಯ ಕುರಿತು ಮಾತನಾಡಿದರು.

ಸಮಾರಂಭದಲ್ಲಿ ಶಾಸಕರಾದ ಶ್ರೀ ಟಿ.ಬಿ.ಜಯಚಂದ್ರ, ಶ್ರೀ ಜೆ. ಸಿ.ಮಾಧುಸ್ವಾಮಿ, ಮಾಜಿ ಸಂಸತ್ ಸದಸ್ಯ ಶ್ರೀ ಜಿ.ಎಸ್. ಬಸವರಾಜು, ಮಾಜಿ ಸಚಿವ ಶ್ರೀ ಸಾಗರನಹಳ್ಳಿ ರೇವಣ್ಣ, ಭೂ ಸೇನಾ ನಿಗಮದ ಅಧ್ಯಕ್ಷ ಶ್ರೀ ಬಾವಿಬೆಟ್ಟಪ್ಪ ಮುಂತಾದವರು ಮಾತನಾಡಿದರು.

ಬೆಳಿಗ್ಗೆ ನಡೆದ ಉದ್ಘಾಟನಾ ಸಮಾರಂಭ ಮೈಸೂರಿನ ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಧಾರ್ಮಿಕ ಸಮಾರಂಭದಲ್ಲಿ ಗೋಡೆಕೆರೆ ಮಠದ ಶ್ರೀ ಶ್ರೀ ಸಿದ್ಧರಾಮ ದೇಶಿಕೇಂದ್ರ ಸ್ವಾಮೀಜಿ, ತಿಪಟೂರು ಗುರುಕುಲಾನಂದ ಆಶ್ರಮದ ಶ್ರೀ ಶ್ರೀ ಇಮ್ಮಡಿ ಕರಿಬಸವ ಸ್ವಾಮಿಗಳು, ಕೇದಿಗೆ ಮಠದ ಶ್ರೀ ಜಯಚಂದ್ರ ಶೇಖರ ಸ್ವಾಮೀಜಿ ಮುಂತಾದವರು ಉಪಸ್ಥಿತರಿದ್ದರು. ಗವಿಮಠದ ಶ್ರೀ ಶ್ರೀ ಚಂದ್ರಶೇಖರ ಸ್ವಾಮೀಜಿಯವರು ಪ್ರಾಸ್ತಾವಿಕ ಭಾಷಣ ಮಾಡಿದರು. ಶ್ರೀ ಟಿ. ಆರ್. ಮಹಾದೇವಯ್ಯ ಕಾರ್ಯಕ್ರಮ ನಿರೂಪಿಸಿದರು.

## ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಕುರಿತು

ಅಂದು ನಾಟಕವನ್ನು ಕೊನೆಯ ಘಟ್ಟದವರೆಗೂ ನೋಡಿದೆ. ತುಂಬ ಸಾಹಸದ ಸಾಧನೆಯಿದು ಪ್ರಯೋಗಗಳ ಸಂಖ್ಯೆ ವಿಸ್ಮಯವನ್ನುಂಟುಮಾಡಿತು. ತುಮಕೂರಿನ ಪರಿಸರಕ್ಕೆ ಈ ಮೂಲಕ ಬಸವಣ್ಣನವರು ತೀರ ಹತ್ತಿರಬರುವಂತಾಗಿದೆ. ಅದನ್ನು ನೋಡಿದವರ ಮೇಲೆ ಪ್ರಭಾವ ಉಂಟಾಗುತ್ತದೆ. ಅದು ಭಾವನಾತ್ಮಕ ಪರಿವರ್ತನೆಯನ್ನೂ ಉಂಟುಮಾಡುತ್ತದೆ. ಎಲ್ಲ ಪಾತ್ರಧಾರಿಗಳು ತನ್ಮಯತೆಯಿಂದಲೇ ಅಭಿನಯಿಸಿದರು. ಪೂಜ್ಯರ ನಿರಂತರವಾದ ಆಶೀರ್ವಾದ ನಿಮಗೆಲ್ಲ ಶ್ರೀರಕ್ಷೆಯಾಗಿದೆ.

**ಡಾ. ಗುರುಲಿಂಗ ಕಾಪಸೆ**
ದುರ್ಗಾಕಾಲನಿ, ಸಪ್ತಾಪುರ
ಧಾರವಾಡ-580 001

# "ಗ್ರಾಹಕ ವಾಣಿ" ಬಿಡುಗಡೆ



ಶ್ರೀ ಸಿದ್ಧಗಂಗಾ ಕಿರಿಯ ಶ್ರೀ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಗ್ರಾಹಕರ ವಾಣಿಯನ್ನು ಬಿಡುಗಡೆ ಮಾಡುತ್ತಿರುವುದು. ಈ ಸಂದರ್ಭದಲ್ಲಿ ಗ್ರಾಹಕ ವಾಣಿ ಸಂಪಾದಕ ಶ್ರೀ ಟಿ.ಎಸ್. ನಿರಂಜನ್, ಡಾ. ಹುಯಿಲ್ ಗೋಳ್, ಜಿಲ್ಲಾಧಿಕಾರಿ ಶ್ರೀ ಗೋಪಾಲಕೃಷ್ಣೇಗೌಡ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

**ತು**ಮಕೂರಿನ ವಕೀಲರೂ, ಗ್ರಾಹಕ ಜಾಗೃತಿ ಪರಿಷತ್ ಅಧ್ಯಕ್ಷರೂ ಆದ ಶ್ರೀ ಟಿ. ಎಸ್. ನಿರಂಜನ್ ಸಂಪಾದಕತ್ವದ "ಗ್ರಾಹಕವಾಣಿ" ಮಾಸ ಪತ್ರಿಕೆಯನ್ನು ಶ್ರೀ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಆಗಸ್ಟ್ ೧೯ರಂದು ಬಿಡುಗಡೆ ಮಾಡಿದರು. ಶ್ರೀ ಶ್ರೀಗಳು ಮಾತನಾಡುತ್ತಾ, "ಕರ್ನಾಟಕದಲ್ಲಿ ಪತ್ರಿಕೆಗಳಿಗೇನೂ ಕೊರತೆಯಿಲ್ಲ. ಆದರೆ ವಿಶಿಷ್ಟತೆ, ಎಲ್ಲರ ಹಿತವನ್ನು ಬಯಸಿ ಒಟ್ಟಾರೆ ಗ್ರಾಹಕರ ಜಾಗೃತಿಗಾಗಿ ಗ್ರಾಹಕವಾಣಿ ಮೂಡಿ ಬಂದಿರುವುದು ಸ್ವಾಗತಾರ್ಹ" ವೆಂದರು. ಪ್ರಸಕ್ತ ಜಂಜಡ ಜಂಜಾಟಗಳ ಸನ್ನಿವೇಶಗಳಲ್ಲಿ ಅನೇಕ ಕಷ್ಟಗಳನ್ನೆದುರಿಸುತ್ತಾ, ಹಲವಾರು ಸಮಸ್ಯೆಗಳಿದ್ದರೂ ಜನಗಳ ಸೇವೆಗಾಗಿ ಗ್ರಾಹಕರ ಜಾಗೃತಿಯನ್ನು ಪತ್ರಿಕೆಗಳ ಮುಖಾಂತರ ಮಾಡಬೇಕೆಂದು ಛಲತೊಟ್ಟು ಕಷ್ಟದ ಕಾರ್ಯವನ್ನು ಕೈಗೆತ್ತಿಕೊಂಡಿರುವ ಸಂಪಾದಕ ಶ್ರೀ ಟಿ.ಎಸ್. ನಿರಂಜನ್‌ರ ಕಾರ್ಯದಲ್ಲಿ ಯಶಸ್ವಿಯಾಗಲೆಂದು ಹಾರೈಸಿದರು.

## ರಾಷ್ಟ್ರ ನೈತಿಕ ಶೋಷಣೆಗೆ ಒಳಗಾಗಿದೆ

"ಸಹಸ್ರಾರು ದೇಶಪ್ರೇಮಿಗಳ ನಿರಂತರ ಹೋರಾಟದ ಫಲವಾಗಿ ನಮಗೆ ಸ್ವಾತಂತ್ರ್ಯ ಲಭಿಸಿದೆ. ಅದನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿ ಯುವ ಜನಾಂಗದ ಮೇಲೆ ಇದೆ" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನುಡಿದರು.

ದಿನಾಂಕ ೧೫-೮-೧೯೯೮ರ ಶನಿವಾರ ಶ್ರೀ ಕ್ಷೇತ್ರದಲ್ಲಿ ನಡೆದ ೫೨ನೇ ಸ್ವಾತಂತ್ರ್ಯದಿನೋತ್ಸವದ ದಿವ್ಯಸಾನಿಧ್ಯವಹಿಸಿ ಆಶೀರ್ವಚನ ನೀಡಿದರು. "ಅಸಂಖ್ಯಾತ ದೇಶಭಕ್ತರ ತ್ಯಾಗ ಬಲಿದಾನಗಳಿಂದ ನಮ್ಮ ಸ್ವಾತಂತ್ರ್ಯ ಮಹಾಸೌಧ ನಿರ್ಮಾಣವಾಗಿದೆ. ಹಲವಾರು ರಂಗಗಳಲ್ಲಿ ಸಾಧನೆ ಮಾಡಿರುವುದರ ಬಗ್ಗೆ ಹೆಮ್ಮೆ ಇದೆ. ಇಂದು ಸಾಮಾಜಿಕ ಪರಿಸ್ಥಿತಿ ನೋಡಿ ವ್ಯಥೆ ಪಡಬೇಕಾಗಿದೆ. ಸಭ್ಯ ಸಂಸ್ಕೃತಿ ಆಚರಣೆಯಿಲ್ಲದೆ ರಾಷ್ಟ್ರನೈತಿಕ ಶೋಷಣೆಗೆ ಒಳಗಾಗಿದೆ. ಆದರ್ಶತ್ವ ಕಣ್ಮರೆಯಾಗುತ್ತಿದೆ. ಎಲ್ಲರು ಉತ್ತಮ ಪ್ರಜೆಗಳಾಗಿ ರಾಷ್ಟ್ರವನ್ನು ಮುನ್ನಡೆಸಲು ಕ್ರಿಯಾಶೀಲರಾಗಬೇಕೆಂದು" ಕರೆಯಿತ್ತರು.

ತುಮಕೂರು ಜಿಲ್ಲಾಧಿಕಾರಿಗಳಾದ ಶ್ರೀ ಕೆ. ಹೆಚ್. ಗೋಪಾಲಕೃಷ್ಣೇಗೌಡ ಅವರು ಧ್ವಜಾರೋಹಣ ಮಾಡಿ ವಿದ್ಯಾರ್ಥಿಗಳ ಪಥ ಸಂಚಲನ ವಂದನಾ ಸ್ವೀಕಾರ ಮಾಡಿದರು. ಅನಂತರ ವಿದ್ಯಾರ್ಥಿಗಳಿಂದ ಕವಾಯತ್ ಪ್ರದರ್ಶನ ನಡೆಯಿತು.

ತುಮಕೂರು ಹೇಮಾವತಿ ನಾಲಾವಲಯದ ಮುಖ್ಯ ಅಭಿಯಂತರರಾದ ಶ್ರೀ ಸಿ. ಎಸ್. ವಿಶ್ವನಾಥ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ವಿದ್ಯಾರ್ಥಿಗಳಿಂದ ಮನ ರಂಜಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

## ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ

"ಆಡುಮುಟ್ಟದ ಸೊಪ್ಪಿಲ್ಲ ಸ್ಮಾರಕಗಳಿಲ್ಲದ ಗ್ರಾಮವಿಲ್ಲ, ಭರತ ಖಂಡದ ಭವ್ಯ ಪರಂಪರೆ ಮತ್ತು ಇತಿಹಾಸವನ್ನು ತಿಳಿಸುವ ಇಂತಹ ಸ್ಮಾರಕಗಳನ್ನು ರಕ್ಷಿಸುವುದು ನಮ್ಮ





ಆದ್ಯಕರ್ತವ್ಯ" ಎಂದು ಸಂಶೋಧಕರು ಹಾಗೂ ಆಯುರ್ವೇದ ವೈದ್ಯರಾದ ಡಾ. ಬಿ. ನಂಜುಂಡಸ್ವಾಮಿ ತಿಳಿಸಿದರು.

ಅವರು ದಿನಾಂಕ ೨೮-೮-೯೮ರ ಶುಕ್ರವಾರ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿಯವರ ಸಹಯೋಗದೊಂದಿಗೆ ಏರ್ಪಡಿಸಲಾಗಿದ್ದ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹವನ್ನು ಉದ್ಘಾಟಿಸಿ ಮಾತನಾಡಿದರು.

ಮೌಲ್ಯಗಳ ಮತ್ತು ಸ್ಮಾರಕಗಳ ಪರಂಪರೆಗಳನ್ನು ರಕ್ಷಿಸುವಲ್ಲಿ ವಿದ್ಯಾರ್ಥಿಗಳ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಇತಿಹಾಸ ವಿಭಾಗದ ರೀಡರ್ ಡಾ. ಡಿ.ಎನ್. ಯೋಗೀಶ್ ನುಡಿದರು. ಐತಿಹಾಸಿಕ ಪರಂಪರೆ ಕುರಿತು ಲಾವಣಿಯನ್ನು ಶ್ರೀ ಕ್ಷೇತ್ರದ ಅಂಧ ಮಕ್ಕಳ ಶಾಲೆಯ ವಿದ್ಯಾರ್ಥಿಗಳು ಹಾಡಿದರು. ರಸ ಪ್ರಶ್ನೆ ಕಾರ್ಯಕ್ರಮದಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಬಹುಮಾನವನ್ನು ಈ ಸಂದರ್ಭದಲ್ಲಿ ವಿತರಿಸಲಾಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಮುಖ್ಯೋಪಾಧ್ಯಾಯರಾದ ಶ್ರೀ ಬಿ.ಎಸ್. ಬಸವರಾಜು ವಹಿಸಿದ್ದರು. ಸಹ ಶಿಕ್ಷಕರಾದ ಎಂ. ನಂದೀಶ್ ಸ್ವಾಗತಿಸಿದರು. ಎಸ್. ಮಲ್ಲಿಕಾರ್ಜುನಯ್ಯ ವಂದನೆ ಸಲ್ಲಿಸಿದರು.

## ಶ್ರೀ ವಿದ್ಯಾಗಣಪತಿ ಮಹೋತ್ಸವ

ಶ್ರೀ ವಿದ್ಯಾಗಣಪತಿಯ ಮಹೋತ್ಸವ ಕಾರ್ಯಕ್ರಮವು ಶ್ರೀ ಕ್ಷೇತ್ರದ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಪ್ರತಿದಿನ ಸಂಜೆ ಗಂಟೆಗೆ ಶ್ರೀ ಕ್ಷೇತ್ರದ ಪ್ರಾರ್ಥನಾ ಸಭಾಂಗಣದಲ್ಲಿ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ವಿಜೃಂಭಣೆಯಿಂದ ನಡೆಯಿತು. ದಿನಾಂಕ ೨೫-೮-೯೮ರ ಮಂಗಳವಾರ ೧೦ ಗಂಟೆಗೆ ಶ್ರೀ ವಿದ್ಯಾಗಣಪತಿಯ ಪ್ರತಿಷ್ಠಾಪನೆ ನಡೆಯಿತು. ಅಂದು ಸಂಜೆ ಶ್ರೀ ಕ್ಷೇತ್ರದ ಸಂಸ್ಕೃತ ಕಾಲೇಜಿನ ಸಹ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಕೆ. ಬಸವರಾಜು ಶಮಂತಕೋಪಾಖ್ಯಾನದ ಬಗ್ಗೆ ವಿಶೇಷ ಉಪನ್ಯಾಸ ಮಾಡಿದರು.

ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ದಿನಾಂಕ ೨೬-೮-೯೮ರ ಬುಧವಾರ ಸಂಜೆ ತುಮಕೂರಿನ ಶ್ರೀ ಸಿದ್ಧಗಂಗಾ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಬಿ. ವೀರಭದ್ರಯ್ಯನವರು ವಿನಾಯಕನನ್ನು ಕುರಿತು ಉಪನ್ಯಾಸ ಮಾಡಿದರು. ತುಮಕೂರು ಜಿಲ್ಲೆಯ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಉಪನಿರ್ದೇಶಕರಾದ ಶ್ರೀ ಎಂ. ಬಿ. ಮಲ್ಲಿಕಾರ್ಜುನಪ್ಪನವರು ಅಧ್ಯಕ್ಷತೆ ವಹಿಸಿದ್ದರು. ದಿನಾಂಕ ೨೭-೮-೯೮ ಗುರುವಾರ ಸಂಜೆ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತನ ಅಧ್ಯಕ್ಷರಾದ ಪ್ರೊ. ಸಿ. ಹೆಚ್. ಮರಿದೇವರು ವಿಘ್ನೇಶ್ವರನನ್ನು ಕುರಿತು ಉಪನ್ಯಾಸ ನೀಡಿದರು. ತುಮಕೂರು ತಾಲ್ಲೂಕು ತಹಶೀಲ್ದಾರ್ ಶ್ರೀ ಜಿ. ವಿ. ವೆಂಕಟೇಶಪ್ಪನವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ದಿನಾಂಕ ೨೮-೮-೯೮ರ ಶುಕ್ರವಾರ ತುಮಕೂರು ಶ್ರೀ ಸಿದ್ಧಗಂಗಾ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಹೆಚ್. ವಿ. ವೀರಭದ್ರಯ್ಯನವರು ವಿದ್ಯಾಗಣಪತಿ ಕುರಿತು ವಿಶೇಷ ಉಪನ್ಯಾಸ ಮಾಡಿದರು. ತುಮಕೂರು ಜಿಲ್ಲಾ ಪಂಚಾಯತ್ ಕಾರ್ಯನಿವಾಹಕ ಇಂಜಿನಿಯರ್ ಶ್ರೀ ಹೆಚ್. ಎಸ್. ಮಹೇಶ್ ಅಧ್ಯಕ್ಷತೆ ವಹಿಸಿದ್ದರು.

೨೯-೮-೯೮ರ ಶನಿವಾರ ಸಂಜೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ ವಿಸರ್ಜನಾ ಮಹೋತ್ಸವ ನಡೆಯಿತು. ಈ ಸಂದರ್ಭದಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡಿ "ಶ್ರೀ ವಿನಾಯಕನಂತೆ ತಂದೆ ತಾಯಿಗಳಲ್ಲಿ ಭಕ್ತಿ, ವ್ಯಾಸಂಗದಲ್ಲಿ ನಿಷ್ಠೆ, ಕರ್ತವ್ಯದಲ್ಲಿ ಶ್ರದ್ಧೆ, ಏಕಾಗ್ರಚಿತ್ತಗಳನ್ನು ಬೆಳೆಸಿಕೊಂಡು ಭಾರತ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವುದರ ಜೊತೆಗೆ ಉತ್ತಮ ಮಾನವರಾಗಿ ಬಾಳಬೇಕೆಂದು" ತಿಳಿಸಿದರು.

## ಶಿಕ್ಷಕರ ಸಭೆ

ಶ್ರೀಕ್ಷೇತ್ರದ ಆವರಣದಲ್ಲಿ ನಡೆಯುತ್ತಿರುವ ಎಲ್ಲಾ ಸನಿವಾಸ ಶಾಲಾ ಕಾಲೇಜುಗಳ ಮುಖ್ಯಶಿಕ್ಷಕರು ಹಾಗೂ ಸಹಶಿಕ್ಷಕ ವರ್ಗದವರ ಸಭೆಯು ಸೆಪ್ಟೆಂಬರ್ ೧೨ರಂದು ವಜ್ರಮಹೋತ್ಸವದ ಹಾಸ್ಟೆಲ್ ಕಟ್ಟಡದ ಮುಂಭಾಗದಲ್ಲಿ ಪರಮಪೂಜ್ಯ ಶ್ರೀಶ್ರೀಗಳವರ ಅಧ್ಯಕ್ಷತೆಯಲ್ಲಿ ನಡೆಯಿತು. ಪ್ರಥಮವಾಗಿ ಶಿಕ್ಷಕರ ಪಾಠ-ಪ್ರವಚನಗಳ ಬಗ್ಗೆ ಚರ್ಚೆ ನಡೆಯಿತು. ನಂತರ ವಿದ್ಯಾರ್ಥಿಗಳ ಆರೋಗ್ಯವನ್ನು ಕುರಿತು ಕ್ಯಾತ್ಸಂದ್ರದ ಪ್ರಾಥಮಿಕ ಆರೋಗ್ಯ ಕೇಂದ್ರದ ಡಾ. ಎಂ.ಕೆ. ಮುನಿರಾಜು ಹಾಗೂ ಶ್ರೀ ಸಿದ್ಧಗಂಗಾ ಆಸ್ಪತ್ರೆಯ ಡಾ. ಹೆಚ್.ಎಂ. ಮಂಜುನಾಥ್‌ರವರು ಮಾತನಾಡಿದರು.

# ಶಿಕ್ಷಕರ ದಿನಾಚರಣೆ




ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು ವೇದಿಕೆಯಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಡೆಪ್ಯೂಟಿ ಜನರಲ್ ಮ್ಯಾನೇಜರ್ ಶ್ರೀ ಎಸ್. ಶಿವಸ್ವಾಮಿ, ಶ್ರೀಮತಿ ಲತಾ ಆಯ್ಯರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಎಸ್. ಆರ್. ಆಯ್ಯರ್ ಹಾಗೂ ಶ್ರೀ ಆರ್. ಲಕ್ಷ್ಮೀನಾರಾಯಣ ಅವರಿದ್ದಾರೆ.

"ಉಪಾಧ್ಯಾಯನ ಕರ್ತವ್ಯ ಇಂದು ಎಂದಿಗಿಂತ ಮಹತ್ತರವಾಗಿದೆ. ಉಪಾಧ್ಯಾಯ ಸ್ನೇಹಿತನಾಗಿ, ಮಾರ್ಗದರ್ಶಿಯಾಗಿ, ತತ್ವಜ್ಞಾನಿಯಾಗಿ ವಿದ್ಯಾರ್ಥಿಗಳ ಎಲ್ಲಾ ಸಮಸ್ಯೆಗಳಿಗೂ ಸ್ಪಂದಿಸಿ ವಿದ್ಯಾರ್ಥಿಗಳ ಉನ್ನತಿಗೆ ತಮ್ಮನ್ನು ಅರ್ಪಿಸಿಕೊಳ್ಳಬೇಕು" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನುಡಿದರು.

ಸೆಪ್ಟೆಂಬರ್ ೧ಂರಂದು ಶ್ರೀಕ್ಷೇತ್ರದಲ್ಲಿ ನಡೆದ ಶಿಕ್ಷಕರ ದಿನಾಚರಣೆಯ ದಿವ್ಯಸಾನಿಧ್ಯ ವಹಿಸಿ ಆರ್ಶೀವಚನ ನೀಡುತ್ತಿದ್ದ ಶ್ರೀ ಶ್ರೀಗಳು "ಇಂದು ದೇಶ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಒಬ್ಬ ತಾಯಿ ಮತ್ತು ಒಬ್ಬ ಶಿಕ್ಷಕ ಮನಸ್ಸು ಮಾಡಿದರೆ ಈ ಸಮಸ್ಯೆಗಳನ್ನು ಪರಿಹಾರ ಮಾಡಲು ಸಾಧ್ಯ" ಎಂದು ನುಡಿದರು. ಮುಂದುವರಿದು "ಕ್ರೌರ್ಯಕ್ಕೆ ಹೆಸರಾದ ರಷ್ಯಾದ ಅಧ್ಯಕ್ಷ ಸ್ಟಾಲೀನ್‌ನನ್ನು ತಮ್ಮ ನಡತೆ, ಗೌರವ, ವಿದ್ವತ್ ಮತ್ತು ಸಂಪನ್ನತೆಯಿಂದ ಮಣಿಯುವಂತೆ ಮಾಡಿದ ಡಾ. ಎಸ್. ರಾಧಾಕೃಷ್ಣನ್‌ರವರಂತೆ ಧೀಮಂತ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕು" ಎಂದು ಕರೆ ನೀಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಬೆಂಗಳೂರು ದೂರದರ್ಶನ ಕೇಂದ್ರದ ತಾಂತ್ರಿಕ ಅಭಿಯಂತರರಾದ ಶ್ರೀ







ಡಾ. ಎಸ್. ರಾಧಾಕೃಷ್ಣನ್ ಅವರ ಮೊಮ್ಮಗಳು ಶ್ರೀಮತಿ ಲತಾ ಐಯ್ಯರ್ ದಂಪತಿಗಳು ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ ಡಾ. ಎಸ್. ರಾಧಾಕೃಷ್ಣನ್ ಅವರ ಭಾವಚಿತ್ರವನ್ನು ಆರ್ಪಿಸಿದರು. ಈ ಸಂದರ್ಭದಲ್ಲಿ ಬೆಂಗಳೂರು ದೂರದರ್ಶನ ಕೇಂದ್ರ ತಾಂತ್ರಿಕ ಅಭಿಯಂತರರಾದ ಶ್ರೀ ಆರ್. ಲಕ್ಷ್ಮೀನಾರಾಯಣ ಅವರು ಉಪಸ್ಥಿತರಿದ್ದರು.

ಆರ್. ಲಕ್ಷ್ಮೀನಾರಾಯಣರಾವ್ ಅವರು ವಹಿಸಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ "ಶ್ರೀ ಸ್ವಾಮಿಗಳವರು ಇಷ್ಟು ಮಂದಿ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಬದುಕಿಗೆ ಆಧಾರವಾಗಿದ್ದಾರೆ. ಈ ಭಾಗ್ಯ ಎಲ್ಲಾ ಮಕ್ಕಳಿಗೂ ದೊರೆತಿದೆ. ಅಧ್ಯಾಪಕರು ಕರ್ತವ್ಯ ದೃಷ್ಟಿಯಿಂದ ಕೆಲಸ ಮಾಡಬೇಕು" ಎಂದು ನುಡಿದರು.

ಬೆಂಗಳೂರಿನ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ವ್ಯವಸ್ಥಾಪಕ ನಿರ್ದೇಶಕ ಶ್ರೀ ಎಸ್.ಆರ್. ಅಯ್ಯರ್ ಅವರು "ಶ್ರೀ ಸ್ವಾಮಿಗಳವರು ಈ ಬೃಹತ್ ಸಾಗರದಂತೆ ಇರುವ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ, ಅವರಿಗೆ ಧಾರ್ಮಿಕವಾದ ಮತ್ತು ಸಾಂಸ್ಕೃತಿಕವಾದ ಬಾಳನ್ನು ನಡೆಸಲು ಸಹಾಯ ಮಾಡಿದ್ದಾರೆ. ಮಕ್ಕಳು ಪೂಜ್ಯರ ನಿಸ್ವಾರ್ಥ ಸೇವೆ ಮತ್ತು ಶ್ರಮವನ್ನು ಅರ್ಥಮಾಡಿಕೊಳ್ಳಬೇಕು" ಎಂದು ನುಡಿದರು. ಅವರು "ಶ್ರೀ ಎಸ್. ರಾಧಾಕೃಷ್ಣನ್‌ರವರಂತೆ ಉತ್ತಮ ಶಿಕ್ಷಕರಾಗಿ, ಆದರ್ಶ ಜೀವಿಗಳಾಗಿ, ಶಿಸ್ತಿನ ಜೀವನ ನಡೆಸಬೇಕು" ಎಂದು ಶಿಕ್ಷಕರಿಗೆ ಕರೆ ಕೊಟ್ಟರು.

ಈ ಸಮಾರಂಭದಲ್ಲಿ ಡಾ. ರಾಧಾಕೃಷ್ಣನ್‌ರವರ ಮೊಮ್ಮಗಳು ಶ್ರೀಮತಿ ಲಲಿತಾ ಅಯ್ಯರ್‌ರವರು ಭಾಗವಹಿಸಿದ್ದುದು ಒಂದು ವಿಶೇಷ ಆಕರ್ಷಣೆಯಾಗಿತ್ತು. ಅಯ್ಯರ್ ದಂಪತಿಗಳು ಶ್ರೀ ರಾಧಾಕೃಷ್ಣನ್‌ರವರ ಭಾವಚಿತ್ರವನ್ನು ಶ್ರೀಶ್ರೀಗಳವರಿಗೆ ಕೊಡುಗೆಯಾಗಿ ಅರ್ಪಿಸಿದರು. ಇದೇ ಸಂದರ್ಭದಲ್ಲಿ ಶ್ರೀ ಎಸ್.ಆರ್. ಅಯ್ಯರ್‌ರವರು ನಿವೃತ್ತ ಶಿಕ್ಷಕರನ್ನು ಸನ್ಮಾನಿಸಿದರು. ಶ್ರೀ ಎಸ್. ಶಿವಕುಮಾರ್ ಸ್ವಾಗತಿಸಿದರು. ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ವಂದನೆ ಸಲ್ಲಿಸಿದರು.

# ತಾಲ್ಲೂಕು ಮಟ್ಟದ ಗ್ರಾಮಾಂತರ ಕ್ರೀಡಾಕೂಟ



ಚಿತ್ರದಲ್ಲಿ ಶಿಕ್ಷಕರಾದ ಶ್ರೀ ಡಿ. ದೇವರಾಜು, ಶ್ರೀ ಬಿ. ಎಸ್. ಬಸವರಾಜು, ಶ್ರೀ ಗವಿಸಿದ್ದಯ್ಯ, ಶ್ರೀ ಜಿ. ಲೋಕೇಶ್, ಶ್ರೀ ರೇಣುಕೇಶ್ ಹಾಗೂ ಶ್ರೀ ದೇವರಾಜು ಅವರೊಂದಿಗೆ ವಿಜೇತ ವಿದ್ಯಾರ್ಥಿಗಳು



೧೯೯೮-೯೯ನೇ ಸಾಲಿನ ತಾಲ್ಲೂಕು ಮಟ್ಟದ ಗ್ರಾಮಾಂತರ ಪ್ರೌಢಶಾಲೆಗಳ ಕ್ರೀಡಾಕೂಟವು ತುಮಕೂರಿನ ಮಹಾತ್ಮ ಗಾಂಧಿ ಕ್ರೀಡಾಂಗಣದಲ್ಲಿ ಆಗಸ್ಟ್ ೨೭, ೨೮ ಮತ್ತು ೨೯ರಂದು ನಡೆಯಿತು. ಕ್ರೀಡಾಕೂಟವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಉದ್ಘಾಟಿಸಿದರು.

ಈ ಕ್ರೀಡಾಕೂಟದಲ್ಲಿ ಶ್ರೀ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಉನ್ನತ ಪ್ರೌಢಶಾಲೆ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಪ್ರೌಢಶಾಲೆಯ ಬಾಲಕಿಯರ ತಂಡ ಕಬ್ಬಡ್ಡಿ ಹಾಗೂ ಹಾಕಿಯಲ್ಲಿ ಪ್ರಥಮ ಸ್ಥಾನ ಪಡೆದರೆ ಬಾಲಕರ ತಂಡ ಓಟ ಹಾಗೂ ಕಬ್ಬಡ್ಡಿಯಲ್ಲಿ ದ್ವಿತೀಯ ಸ್ಥಾನವನ್ನು ಗಳಿಸಿಕೊಂಡಿತು. ಹಿರಿಯ ಪ್ರಾಥಮಿಕ ಶಾಲೆಯ ಬಾಲಕರ ತಂಡ ಎತ್ತರ ಜಿಗಿತ, ವಾಲಿಬಾಲ್ ಹಾಗೂ ಓಟದಲ್ಲಿ ಪ್ರಥಮ ಸ್ಥಾನವನ್ನು ಪಡೆದು ಸಮಗ್ರ ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡು ಶ್ರೀ ಕ್ಷೇತ್ರಕ್ಕೆ ಕೀರ್ತಿಯನ್ನು ತಂದು ಕೊಟ್ಟಿತು.

ವರದಿ : ಕೆ. ಬಿ. ಶಿವಶಂಕರಯ್ಯ









# ಪೌಷ್ಠಿಕಾಂಶಗಳ ಕೈತೋಟ


- ಡಾ. ಕೆ. ಎನ್. ವೆಂಕಟೇಶಮೂರ್ತಿ

ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಯೋಜನೆ, ಉಡುಪಿ.


*ನಾವು ದಿನ ನಿತ್ಯ ಸೇವಿಸುವ ಆಹಾರದಲ್ಲಿ ಅಕ್ಕಿ, ರಾಗಿ, ಗೋಧಿಯ ಅಂಶ ಮಾತ್ರ ಹೆಚ್ಚಾಗಿರುತ್ತದೆಯೇ ವಿನಃ ಹಣ್ಣು ಮತ್ತು ತರಕಾರಿಗಳ ಪ್ರಮಾಣ ಬಹಳಷ್ಟು ಕಡಿಮೆ ಇರುತ್ತದೆ. ನಾವು ಆಹಾರ ವಸ್ತುಗಳನ್ನು ಖರೀದಿಸುವಾಗ ಹಣ್ಣು ಮತ್ತು ಸೊಪ್ಪು ತರಕಾರಿಗಳನ್ನು ಕೊಳ್ಳುವುದರ ಕಡೆ ಹೆಚ್ಚು ಗಮನ ಕೊಡುವುದಿಲ್ಲ. ಕಾರಣ ಇವುಗಳ ಬೆಲೆ ಹೆಚ್ಚು ದುಬಾರಿಯಾಗಿರುವುದು, ಅವು ಕೇವಲ ಶ್ರೀಮಂತರ ಆಹಾರವೆನ್ನುವ ಭಾವನೆ ಹಾಗೂ ಅವುಗಳಲ್ಲಿರುವ ಪೋಷಕಾಂಶಗಳ ಬಗ್ಗೆ ಅರಿವಿಲ್ಲದೇ ಇರುವುದಾಗಿದೆಯೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.*

ನಾವು ಸೇವಿಸುವ ಆಹಾರ ಸಮತೋಲನವಾಗಿರಬೇಕು. ಅಂದರೆ ಆಹಾರ ಧಾನ್ಯ, ಬೇಳೆ ಕಾಳುಗಳನ್ನು ಎಷ್ಟು ಪ್ರಮಾಣದಲ್ಲಿ ಬಳಸುತ್ತಿದ್ದೇವೆಯೋ ಅಷ್ಟೇ ಪ್ರಮಾಣದಲ್ಲಿ ಸೊಪ್ಪು, ತರಕಾರಿ, ಹಣ್ಣು ಹಂಪಲುಗಳನ್ನು ಬಳಸಬೇಕು. ಸೊಪ್ಪು-ತರಕಾರಿ ಹಣ್ಣು ಹಂಪಲುಗಳು ಭೂಮಾತೆ ನೀಡಿದ ವರಪ್ರಸಾದ. ಇದು ಜೀವಸತ್ವ ಹಾಗೂ ಖನಿಜಗಳ ಗಣಿ ಇದ್ದಂತೆ. ಇವುಗಳ ದಿನನಿತ್ಯದ ಬಳಕೆಯಿಂದ ನಮ್ಮ ದೇಹದ ಬೆಳವಣಿಗೆಗೆ, ರಕ್ಷಣೆಗೆ ಬೇಕಾಗುವ ಕಬ್ಬಿಣಾಂಶ, ಸುಣ್ಣಾಂಶ (ಕ್ಯಾಲ್ಸಿಯಂ) ವಿಟಮಿನ್ 'ಎ' (ಕೆರೋಟಿನ್), ವಿಟಮಿನ್ 'ಸಿ', ವಿಟಮಿನ್ 'ಬಿ' ಕಾಂಪ್ಲೆಕ್ಸ್ ಅದರಲ್ಲೂ ಮುಖ್ಯವಾಗಿ ರೈಬೋಫ್ಲೆವಿನ್ ಮತ್ತು ಫಾಲಿಕ್ ಆಸಿಡ್ ಇವುಗಳನ್ನು ಹೊಂದಿರುವ ಸಂಪನ್ಮೂಲ ಗಳಾಗಿವೆ. ಇವುಗಳ ಸೇವನೆಯಿಂದ ದೇಹವು ದೃಢಕಾಯವಾಗಿ, ರೋಗರುಜಿನಗಳು ಬಾರದಂತೆ ರಕ್ಷಿಸುತ್ತದೆ. ಸೊಪ್ಪುತರಕಾರಿ ಗಳಲ್ಲಿ ನಾರಿನಂಶವಿರುವುದರಿಂದ, ನಾರು ಕರುಳಿನ ಚಲನೆಗೆ ಉತ್ತೇಜನ ನೀಡುತ್ತದೆ. ಇದರಿಂದ ಸೇವಿಸಿದ ಆಹಾರವು ಸುಲಭವಾಗಿ ಜೀರ್ಣವಾಗಲು ಸಹಕಾರಿಯಾಗುವುದಲ್ಲದೆ ಮಲಬದ್ಧತೆಯು ನಿವಾರಣೆಯಾಗುತ್ತದೆ. ಹಣ್ಣುಗಳ ಸೇವನೆಯಿಂದ ಅವುಗಳಲ್ಲಿರುವ ಆಮ್ಲಗಳು ಸೇವಿಸಿದ ಆಹಾರವು ಜೀರ್ಣವಾಗಿ ರಕ್ತಗತವಾಗಲು ಸಹಾಯ ಮಾಡುತ್ತದೆ. ಕೆಲವು ಗೆಡ್ಡೆ ಗೆಣಸು ಹಾಗೂ ಹಣ್ಣುಗಳ ಸೇವನೆಯಿಂದ ದೇಹಕ್ಕೆ ಶಕ್ತಿ ಲಭ್ಯವಾಗುತ್ತದೆ. ಇಂದಿನ ಪರಿಸರದಲ್ಲಿ ಜನತೆಯನ್ನು ಬಾಧಿಸುತ್ತಿರುವಂತಹ ಕ್ಯಾನ್ಸರ್, ರಕ್ತದೊತ್ತಡ, ಹೃದಯಾಘಾತ, ಮಧುಮೇಹ ಮುಂತಾದ ರೋಗಗಳಿಗೆ ನಾರಿನಂಶವುಳ್ಳ ಸೊಪ್ಪು, ತರಕಾರಿ, ಹಣ್ಣುಗಳನ್ನು ಬಳಸಿ ಹತೋಟಿಯಲ್ಲಿಡಬಹುದೆಂದು ಅನೇಕ ಸಂಶೋಧನೆಗಳಿಂದ ತಿಳಿದು ಬಂದಿದೆ.

ಒಂದು ಅಂದಾಜಿನ ಪ್ರಕಾಶ ಭಾರತದಲ್ಲಿ ಪ್ರತಿಯೊಬ್ಬನಿಗೂ ಪ್ರತಿದಿನವೂ ಕೇವಲ ೬೦ ಗ್ರಾಂ ಹಣ್ಣು ಮತ್ತು ೯೦ ಗ್ರಾಂ ತರಕಾರಿ ದೊರೆಯುತ್ತಿದೆ. ಆದರೆ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ (ಐ.ಸಿ.ಎಂ.ಆರ್) ಶಿಫಾರಸ್ಸಿನಂತೆ ನಮ್ಮ ಆಹಾರ ಸಮತೋಲನವಾಗಿರಬೇಕಾದರೆ ಪ್ರತಿನಿತ್ಯವೂ ನಾವು ಸುಮಾರು ೧೫೦ ಗ್ರಾಂ ಸೊಪ್ಪು ತರಕಾರಿ ಮತ್ತು ೮೫ ಗ್ರಾಂಗಳಷ್ಟು ಹಣ್ಣುಗಳನ್ನು ಸೇವಿಸಬೇಕು. ಇಷ್ಟು ಪ್ರಮಾಣದ ಹಣ್ಣು ತರಕಾರಿಗಳು ಪ್ರತಿಯೊಬ್ಬರಿಗೂ ದೊರೆಯಬೇಕಾದರೆ ಈಗಿರುವ ಉತ್ಪಾದನೆಯನ್ನು ಮೂರುಪಟ್ಟು ಹೆಚ್ಚಿಸಬೇಕು. ಏಕೆಂದರೆ ಈ ಶತಮಾನದ ಅಂತ್ಯದ ವೇಳೆಗೆ ಭಾರತದ ಜನಸಂಖ್ಯೆ ನೂರು ಕೋಟಿ ಆಗಲಿದ್ದು ಎಲ್ಲರಿಗೂ ಅವಶ್ಯಕವಾಗುವಷ್ಟು ಹಣ್ಣು ಮತ್ತು ತರಕಾರಿಗಳನ್ನು ಒದಗಿಸಲು ಮೂರುಪಟ್ಟು ಬೆಳೆಸಬೇಕಾಗುತ್ತದೆ. ಈ ಸಮಸ್ಯೆಗೆ ಸರಿಯಾದ ಪರಿಹಾರವೆಂದರೆ ನಮ್ಮದೇ ಆದ ಪೌಷ್ಟಿಕ ಕೈತೋಟ ತಯಾರಿಸುವುದೊಂದೇ ದಾರಿ.

ಮನೆಯ ಹಿತ್ತಲಲ್ಲಿ ಅಥವಾ ದೊರೆಯಬಹುದಾದ ಅಲ್ಪ ಸ್ವಲ್ಪ ಜಾಗದಲ್ಲಿ ಕೈತೋಟ ಮಾಡಿದ್ದೇ ಆದರೆ ನಾವು ಈಗ ಸೇವಿಸುತ್ತಿರುವ ಆಹಾರದ ಜೊತೆಗೆ ಸೊಪ್ಪು ತರಕಾರಿ ಹಣ್ಣುಗಳನ್ನು ಪ್ರತಿನಿತ್ಯವೂ ಸೇವಿಸಲು ಸಹಕಾರಿಯಾಗುತ್ತದೆ.



**ಸೊಪ್ಪುಗಳು** : ಕರಿಬೇವು, ಕೊತ್ತಂಬರಿ, ಪುದೀನ, ಚಕ್ಕೋತ, ಸಬ್ಬಸಿಗೆ, ದಂಟು ಪಾಲಕ್, ಹೊನಗೊನೆ, ಹರಿವೆ, ಬಸಳೆ ಮುಂತಾದುವು. ಇವು ಮುಖ್ಯವಾಗಿ 'ಎ' ಹಾಗೂ 'ಬಿ' ಗುಂಪಿನ ಜೀವಸತ್ವಗಳು ಸುಣ್ಣ, ರಂಜಕ ಮತ್ತು ಕಬ್ಬಿಣದ ಆಹಾರ ಮೂಲಗಳು.

**ತರಕಾರಿಗಳು** : ಬೆಂಡೆಕಾಯಿ, ಹುರುಳಿಕಾಯಿ, ಹಾಗಲಕಾಯಿ, ಪಡವಲಕಾಯಿ, ಹೀರೇಕಾಯಿ, ಬದನೆ, ನುಗ್ಗೆ, ಟೊಮಾಟೋ ಚಪ್ಪರದವರೆ, ಕುಂಬಳ ಮುಂತಾದುವುಗಳು. ಇವು ಜೀವಸತ್ವಗಳ ಹಾಗೂ ಖನಿಜ - ಲವಣಗಳ ಆಹಾರ ಮೂಲಗಳು.

**ಗೆಡ್ಡೆ ಗೆಣಸು** : ಆಲುಗೆಡ್ಡೆ, ಸುವರ್ಣ ಗೆಡ್ಡೆ, ಕ್ಯಾರೆಟ್, ಮೂಲಂಗಿ, ಗೆಣಸು, ಬೀಟ್‌ರೂಟ್, ಇವು ಶರ್ಕರ ಪಿಷ್ಠ ಹಾಗೂ 'ಎ' ಜೀವಸತ್ವಗಳ ಆಹಾರ ಮೂಲಗಳು.

ಅಗತ್ಯವಿರುವಾಗ ತಾಜಾತರಕಾರಿ,ಹಣ್ಣು ಹಂಪಲುಗಳನ್ನು ಕಿತ್ತು ಬಳಸಬಹುದು. ಈ ರೀತಿಯ ತಾಜಾ ತರಕಾರಿ ಹಣ್ಣುಗಳು ಪೌಷ್ಟಿಕಕತೆಯಿಂದ ಕೂಡಿರುತ್ತವೆ. ಮಾರುಕಟ್ಟೆಯಿಂದ ಕೊಂಡುತರುವ ಬಾಡಿದ ತರಕಾರಿಗಳಲ್ಲಿ ಹಾಗೂ ಕೃತಕ ಪದಾರ್ಥಗಳಿಂದ ಹಣ್ಣು ಮಾಡಿದ ಹಣ್ಣುಗಳಲ್ಲಿ ಪೌಷ್ಟಿಕಾಂಶ ನಷ್ಟವಾಗಿರುವುದೇ ಅಲ್ಲದೆ ಅವು ರುಚಿಯಾಗಿಯೂ ಇರುವುದಿಲ್ಲ. ಅಲ್ಲದೆ ರಸ್ತೆ ಬದಿಯಲ್ಲಿ ಮಾರುವ ಸೊಪ್ಪು ತರಕಾರಿ ಹಣ್ಣುಗಳ ಮೇಲೆ ಧೂಳು, ಕ್ರಿಮಿಕೀಟಗಳು ಕುಳಿತು ರೋಗಗಳನ್ನು ಹರಡುವುದರಿಂದಲೂ, ತೋಟಗಾರರು ಕೀಟ ಹಾಗೂ ರೋಗಗಳ ಹತೋಟಿಗಾಗಿ ಹೆಚ್ಚು ಹೆಚ್ಚಾಗಿ ಬಳಸಿದ ಕೀಟನಾಶಕಗಳು ನಮ್ಮ ದೇಹವನ್ನು ಸೇರಿ ಆರೋಗ್ಯಕ್ಕೆ ಹಾನಿ ಮಾಡುವುದರಿಂದಲೂ ನಮ್ಮದೇ ಆದ ಒಂದು ಪೌಷ್ಟಿಕ ಕೈತೋಟವಿರಬೇಕು. ಇದರಿಂದ ಒಂದಕ್ಕೆರಡು ಬೆಲೆ ಕೊಟ್ಟು ಮಾರುಕಟ್ಟೆಯಲ್ಲಿ ಕಳಪೆಗುಣಮಟ್ಟದ ಹಣ್ಣು ತರಕಾರಿಗಳನ್ನು ಕೊಂಡುಕೊಳ್ಳುವುದು ತಪ್ಪುತ್ತದೆ. ಅಲ್ಲದೆ ಕೈತೋಟದಲ್ಲಿ ದಿನಕ್ಕೆ ಎರಡು ಮೂರುಗಂಟೆಗಳ ಕಾಲ ಕೆಲಸ ಮಾಡಿದ್ದೇ ಆದರೆ ಶರೀರಕ್ಕೆ ಸಾಕಷ್ಟು ವ್ಯಾಯಾಮ ದೊರೆತು ಲವಲವಿಕೆ ಉಲ್ಲಾಸ ಉಂಟಾಗುತ್ತದೆ.

ಸಾಮಾನ್ಯವಾಗಿ ಮಾದರಿ ಕೈ ತೋಟದಲ್ಲಿ ಬೆಳೆಯಬಹುದಾದಂತಹ ಹಣ್ಣು ಮತ್ತು ತರಕಾರಿಗಳೆಂದರೆ :

**ಹಣ್ಣುಗಳು** : ಮಾವು, ಸೀಬೆ, ಪರಂಗಿ, ಚಕ್ಕೋತ, ಸೀತಾಫಲ, ದಾಳಿಂಬೆ, ಹಲಸು, ಚೆರ್ರಿ, ಬಾಳೆ, ಸಪೋಟ ನಲ್ಲಿಕಾಯಿ, ಇತ್ಯಾದಿ ಇವು ಮುಖ್ಯವಾಗಿ 'ಸಿ' ಜೀವಸತ್ವ ಹಾಗೂ 'ಎ' ಜೀವಸತ್ವದ ಆಹಾರಮೂಲಗಳು.

ಕೈತೋಟ ಮಾಡುವಾಗ ಮನೆಯ ಸುತ್ತಲೂ ದೊರೆಯಬಹುದಾದ ಸ್ಥಳ, ಮನೆಯಲ್ಲಿರುವವರ ಸಂಖ್ಯೆ, ಅವರುಗಳ ಬಿಡುವಿನ ವೇಳೆ, ಅವರವರ ಇಚ್ಛೆಗೆ ಅನುಸಾರವಾದ ಬೆಳೆ ಇವುಗಳನ್ನು ಗಮನದಲ್ಲಿಟ್ಟುಕೊಂಡು ಕೈತೋಟ ಮಾಡಿದರೆ ಹೆಚ್ಚಿನ ಪ್ರಯೋಜನ ಪಡೆದು ಕೊಳ್ಳಬಹುದು.

ಒಟ್ಟಿನಲ್ಲಿ ಹೇಳಬೇಕಾದರೆ "ಕೈಕೆಸರಾದರೆ ಬಾಯಿಮೊಸರು' ಎಂಬ ನಾಣ್ಣುಡಿಯಂತೆ ನಮ್ಮ ದಿನ ನಿತ್ಯದ ಆಹಾರದಲ್ಲಿ ಸೊಪ್ಪು ತರಕಾರಿ - ಹಣ್ಣುಗಳ ಬಳಕೆಯನ್ನು ಹೆಚ್ಚಿಸಲೇಬೇಕು ಎನ್ನುವ ಮನಸ್ಸು ಮಾಡಬೇಕು. ಇದರಿಂದ ಆಹಾರದಲ್ಲಿ ಖನಿಜ, ಜೀವಸತ್ವ ಹಾಗೂ ಲವಣಗಳ ಕೊರತೆಯನ್ನು ನೀಗಬಹುದು ಮತ್ತು ಇವುಗಳಿಗಾಗಿ ಟಾನಿಕ್, ಮಾತ್ರೆಗಾಗಿ ವೈದ್ಯರನ್ನು ಮೊರೆಹೋಗುವುದು ತಪ್ಪುತ್ತದೆ. ಮನೆಗೊಂದು ಮಗು ಹೇಗೆ ಶೋಭೆಯೋ, ಮನೆಗೊಂದು ಪೌಷ್ಟಿಕ ಮಾದರಿ ತೋಟ ಶೋಭೆ ಎನ್ನಬಹುದು.

ಕೈತೋಟಕ್ಕೆ ಬೇಕಾಗುವ ಸಸಿ, ಬೀಜಗಳನ್ನು ಅರಣ್ಯ, ತೋಟಗಾರಿಕೆ ಮತ್ತು ಖಾಸಗಿ ನರ್ಸರಿಗಳಿಂದ ಪಡೆದುಕೊಳ್ಳಬಹುದು. ಮನೆಯಲ್ಲಿ ಉಳಿಯುವ ಕಸಕಡ್ಡಿಗಳನ್ನು ಎಲ್ಲೆಂದರಲ್ಲಿ ಎಸೆದು ರೋಗರುಜಿನಗಳನ್ನು ಆಹ್ವಾನಿಸುವ ಬದಲು ಸೇಂದ್ರೀಯ ಗೊಬ್ಬರ ತಯಾರು ಮಾಡಿ ಕೈತೋಟಕ್ಕೆ ಉಪಯೋಗಿಸಬಹುದು.







# ಸಾಧನೆಯ ಸಂಕಲ್ಪಕ್ಕೆ ಸಾಧನೆಯೇ ಸ್ಫೂರ್ತಿ

ಸುಮಾರು ೨೦೦ ವರ್ಷಗಳ ಬಂಧನದ ಸಂಕೋಲೆಯಲ್ಲಿ ಸಿಲುಕಿದ್ದ ಭರತಖಂಡವನ್ನು ಮುಕ್ತಿಗೊಳಿಸುವಲ್ಲಿ ನಡೆದ ಹೋರಾಟ ಒಂದು ಯಶೋಗಾಥೆ. ಐದು ದಶಕಗಳ ಹಿಂದೆ ಸ್ವಾತಂತ್ರ್ಯ ದೀಕ್ಷೆ ಪಡೆದು ೫೧ನೇ ವರ್ಷಕ್ಕೆ ಕಾಲಿಡುತ್ತಿರುವ ಈ ಸಂದರ್ಭದಲ್ಲಿ ಈ ಕೀರ್ತಿಗೆ ಪಾತ್ರರಾದ ಮಹಾತ್ಮರನ್ನು ಸ್ಮರಿಸೋಣ. ಬಲಿಷ್ಠ ಭಾರತದ ನಿರ್ಮಾಣಕ್ಕಾಗಿ ಗುರುತಿಸಿಕೊಂಡಿರುವ ಆದ್ಯ ವಲಯಗಳಾದ ಶಿಕ್ಷಣ, ಕುಡಿಯುವ ನೀರು, ಕೃಷಿ, ವಸತಿ, ನೀರಾವರಿ, ಕೈಗಾರಿಕೆ, ಆರೋಗ್ಯ, ವಿಜ್ಞಾನ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಆಗಿರುವ ಮಹತ್ತರ ಸಾಧನೆಗಳ ಅವಲೋಕನದೊಂದಿಗೆ ದಾಪುಗಾಲು ಹಾಕೋಣ. ಸ್ವತಂತ್ರ ಭಾರತದಲ್ಲಿ ಕನ್ನಡ ನಾಡು ಕಂಡ ಪ್ರಗತಿಯ ಸಿಹಿಯನ್ನು ಸವಿಯೋಣ.

ಬುದ್ಧ, ಬಸವಣ್ಣ, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಅರವಿಂದ ಘೋಷ್, ಡಾ. ಅಂಬೇಡ್ಕರ್‌ರಂತಹ ಮೇರು ಸದೃಶ ಚೇತನಗಳಿಗೆ ಜನ್ಮವಿತ್ತ ಈ ಭರತಖಂಡ ನಾಗರೀಕತೆಯ ಆರಂಭದಿಂದ ಸ್ವಾತಂತ್ರ ಪೂರ್ವದವರೆಗೂ ತನ್ನ ಆದರ್ಶ ಮತ್ತು ಸ್ಫೂರ್ತಿಗಳಿಗಾಗಿ ವಿಶ್ವದ ಇತರ ದೇಶಗಳು ತನ್ನೆಡೆಗೆ ಮುಖಮಾಡಿ ನಿಲ್ಲುವಂತೆ ಮಾಡಿತೆಂಬುದು ಇತಿಹಾಸಬಲ್ಲ ಎಲ್ಲರಿಗೂ ಗೊತ್ತಿರುವ ಸಂಗತಿ. ಆದರೆ ಸ್ವಾತಂತ್ರ್ಯ ನಂತರದ ಭಾರತೀಯರು ಕಂಡ ಕನಸು ನನಸಾಗಬೇಕಾಗಿದೆ. ಬಡತನ, ಅನಕ್ಷರತೆ, ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ ಇಂದು ನಮ್ಮ ಆತಂತರಿಕ ಸಮಸ್ಯೆಗಳಾಗಿ ಕಾಡುತ್ತಿವೆ. ದೇಶಪ್ರೇಮ, ಸಹಿಷ್ಣುತೆ, ಜಾತ್ಯಾತೀತ ಮನೋಭಾವನೆಗಳನ್ನು ಮೈಗೂಡಿಸಿಕೊಂಡು ದೇಶದ ಸಮಸ್ಯೆಗಳನ್ನು ನಿವಾರಿಸಲು ಕಂಕಣಬದ್ಧರಾಗೋಣ. ಸುವರ್ಣ ಸ್ವಾತಂತ್ರ್ಯೋತ್ಸವದ ಆಚರಣೆ ಈ ದಿಸೆಯಲ್ಲಿ ಎಲ್ಲರಿಗೂ ಪ್ರೇರಣೆ ನೀಡಲಿ.

ನಾಡಜನತೆಗೆ ಸ್ವಾತಂತ್ರ್ಯೋತ್ಸವದ ಶುಭಾಶಯಗಳು

**- ಜೆ. ಹೆಚ್. ಪಟೇಲ್**
ಮುಖ್ಯಮಂತ್ರಿಗಳು

## ಪ್ರಗತಿಯ ಪಕ್ಷಿನೋಟ

ದೀರ್ಘಕಾಲದಿಂದ ಸಮಸ್ಯೆಯ ಕಗ್ಗಂಟಾಗಿದ್ದ ಕಾವೇರಿ ಜಲ ವಿವಾದಕ್ಕೆ ಸೌಹಾರ್ದಯುತ ಪರಿಹಾರ. ಇದು ಮಾನ್ಯ ಮುಖ್ಯಮಂತ್ರಿ ಶ್ರೀ ಜೆ. ಹೆಚ್. ಪಟೇಲ್ ಅವರ ದೂರದೃಷ್ಟಿ ಮತ್ತು ಧೀಮಂತ ನಾಯಕತ್ವದ ದ್ಯೋತಕ. **ನೀರಾವರಿ** : ೧೯೯೭-೯೮ ೨೬.೭೭ ಲಕ್ಷ ಹೆಕ್ಟೇರುಗಳು. ಕೃಷ್ಣಾ ನೀರಾವರಿಗೊಳಪಡಿಸಿದ ಪ್ರದೇಶ ೧೯೯೪-೯೫, ೨೫.೦ ಲಕ್ಷ ಹೆಕ್ಟೇರುಗಳು, ೧೯೯೭-೯೮ ೨೬.೭೭ ಲಕ್ಷ ಹೆಕ್ಟೇರುಗಳು. ಕೃಷ್ಣಾ ಮೇಲ್ದಂಡೆ ಕಾಲುವೆಯೋಜನೆಯಡಿಯಲ್ಲಿ ೩೦೦ ಕಿ. ಮೀ. ಉದ್ದದ ಕಾಲುವೆಯ ನಿರ್ಮಾಣ ಕಾರ್ಯಪೂರ್ಣ. ನೀರಾವರಿ ಯೋಜನೆಗಳಿಗಾಗಿ ಯೋಜನೆ, ಯೋಜನೇತರ ಶೀರ್ಷಿಕೆಯಡಿಯಲ್ಲಿ ೧೯೯೭-೯೮ರಲ್ಲಿ ೧೯೩೭ ಕೋಟಿ ರೂ.ಗಳು ಮೀಸಲು. **ಕೃಷಿ ಇಲಾಖೆ** : ೧೯೯೨-೯೩ರಲ್ಲಿ ೮೪.೯೮ ಲಕ್ಷ ಟನ್ನುಗಳು ಆಹಾರ ಧಾನ್ಯದ ಉತ್ಪಾದೆ ೧೯೯೬-೯೭ರಲ್ಲಿ ೯೧.೭೦ ಲಕ್ಷ ಟನ್ನುಗಳ ದಾಖಲೆ ಉತ್ಪಾದನೆ. **ಸಮಾಜ ಕಲ್ಯಾಣ** : ೧೯೫೬ರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗಾಗಿ ೪೦ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ ಮಂಜೂರಾತಿ ಹಾಗೂ ೨೫ ಮೆಟ್ರಿಕ್ ಪೂರ್ವದ ಮತ್ತು ೨೫ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಮಂಜೂರಾತಿ. ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗಾಗಿ ಕಳೆದ ವರ್ಷ ೪೮ ಮತ್ತು ಈ ವರ್ಷ ೫೦ ವಿದ್ಯಾರ್ಥಿನಿಲಯಗಳಿಗೆ ಮಂಜೂರಾತಿ. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಅರುಣೋದಯ ಉದ್ಯೋಗಿನಿ, ನವಚೇತನ, ಜಾಗೃತಿ, ನಮ್ಮ ಮಗಳು, ನಮ್ಮ ಶಕ್ತಿ ಮುಂತಾದ ಯೋಜನೆಗಳನ್ನು ಪ್ರಾರಂಭಿಸಲಾಗಿದೆ. ವೃತ್ತಿಪರ ಶಿಕ್ಷಣ ಪಡೆಯಲು ಹಿಂದುಳಿದ ವರ್ಗದವರ ಮತ್ತು ಅಲ್ಪ ಸಂಖ್ಯಾತರಿಗಾಗಿ ಅರಿವು ಯೋಜನೆ.

**ಗ್ರಾಮೀಣಾಭಿವೃದ್ಧಿ :** ನಿರ್ಮಲ ಗ್ರಾಮ ಯೋಜನೆಯಡಿಯಲ್ಲಿ ಕಳೆದ ೩ ವರ್ಷಗಳಲ್ಲಿ ೩,೬೦,೦೦೦ ಶೌಚಾಲಯಗಳ ನಿರ್ಮಾಣ. ೧೯೯೫-೯೮ರ ಅವಧಿಯಲ್ಲಿ ೪೦೬.೯೯ ಕೋಟಿ ರೂ. ವೆಚ್ಚದಲ್ಲಿ ಗ್ರಾಮೀಣ ಪ್ರದೇಶದ ಜನರಿಗಾಗಿ ಉದ್ಯೋಗ ಸೃಷ್ಟಿ. **ಆರೋಗ್ಯ :** ೧೯೫೬-೫೭ರಲ್ಲಿ ಆಸ್ಪತ್ರೆಗಳ ಸಂಖ್ಯೆ ೯೭. ೧೯೯೬-೯೭ರಲ್ಲಿ ಆಸ್ಪತ್ರೆಗಳ ಸಂಖ್ಯೆ ೨೯೪ ಮತ್ತು ೧೯೭೧ ಚಿಕಿತ್ಸಾಲಯಗಳು. ರಾಯಚೂರಿನಲ್ಲಿ ೨೯.೨೫ ಕೋಟಿ ರೂ.ಗಳ ವೆಚ್ಚದಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯೊಂದನ್ನು ರೂಪಿಸಲಾಗುತ್ತಿದೆ. ೩ವರ್ಷಗಳಲ್ಲಿ ೨೩೨ ಸಮುದಾಯ ಆರೋಗ್ಯ ಕೇಂದ್ರಗಳ ಪ್ರಾರಂಭ. ಆವಾಸ್ ಯೋಜನೆ, ಗೃಹ ಮಂಡಳಿ, ಅಂಬೇಡ್ಕರ್ ಯೋಜನೆ, ಕೊಳಚೆಪ್ರದೇಶ ನಿರ್ಮೂಲನಾ ಯೋಜನೆ ಮತ್ತು ಆಶ್ರಯ ಯೋಜನೆಯಡಿಯಲ್ಲಿ ಒಟ್ಟು ೩.೫ ಲಕ್ಷ ಮನೆಗಳನ್ನು ಕಟ್ಟಲಾಗಿದೆ. ೧೯೯೮-೯೯ರ ಅಂತ್ಯದವರೆಗೆ ಒಟ್ಟಾರೆ ೫ ಲಕ್ಷ ಮನೆಗಳ ಪೂರ್ಣಗೊಳಿಸುವ ಗುರಿ. **ಶಿಕ್ಷಣ :** ೧೯೬೦ರಲ್ಲಿ ರಾಜ್ಯದ ಸಾಕ್ಷರತಾ ಪ್ರಮಾಣ ಶೇ. ೨೦. ಈಗ ಶೇ. ೫೬ ತಲುಪಿದೆ. ಹೊಸದಾಗಿ ೧೪೯೯ ಪ್ರಾಥಮಿಕ ಶಾಲೆಗಳ ಪ್ರಾರಂಭ. ೩೦೨೪ ಕಿರಿಯ ಪ್ರಾಥಮಿಕ ಶಾಲೆಗಳನ್ನು ಹಿರಿಯ ಪ್ರಾಥಮಿಕ ಶಾಲೆಗಳಾಗಿ ಮಾರ್ಪಾಡು. ಕಳೆದ ೩ ವರ್ಷಗಳ ಅವಧಿಯಲ್ಲಿ ೫೫,೮೨೫ ಪ್ರಾಥಮಿಕ, ೫೪೨೧ ಪ್ರೌಢಶಾಲಾ ಶಿಕ್ಷಕರ ನೇಮಕ. ೨೦೪ ಖಾಸಗೀ ಸಂಸ್ಥೆಗಳು ಪ್ರೌಢಶಾಲೆಗಳನ್ನು ತೆರೆಯಲು ಅನುಮತಿ. **ವಿದ್ಯುತ್ :** ೧೯೯೪-೯೫ರಲ್ಲಿ ೧೬,೩೧೫ ದಶಲಕ್ಷ ಯೂನಿಟ್‌ಗಳ ವಿದ್ಯುತ್ ಉತ್ಪಾದನೆಯ ಹಾಗೂ ೧೯೯೬-೯೭ರ ಅವಧಿಯಲ್ಲಿ ೧೬೫೯೧ ದಶಲಕ್ಷ ಯೂನಿಟ್‌ಗಳ ವಿದ್ಯುತ್ ಉತ್ಪಾದನೆ. ಕದ್ರಾ ಮತ್ತು ಕೊಸಳ್ಳಿ ಜಲ ವಿದ್ಯುತ್ ಯೋಜನೆಗಳ ಮೊದಲ ಘಟ್ಟ ಪೂರ್ಣಗೊಂಡು ತಲಾ ೫೦ ಮೆ. ವ್ಯಾ. ವಿದ್ಯುತ್ ಉತ್ಪಾದನೆ ಪ್ರಾರಂಭ. **ಕೈಗಾರಿಕೆ :** ಪ್ರಸ್ತುತ ಸರ್ಕಾರದ ಅವಧಿಯಲ್ಲಿ ಅನೇಕ ಬಹುರಾಷ್ಟ್ರೀಯ ಕಂಪನಿಗಳು (ಟೋಯೋಟಾ, ವೋಲ್ವೋ ಇತ್ಯಾದಿ) ಸ್ಥಾಪನೆ ಹಾಗೂ ದೇಶೀಯ ಟೆಲ್ಕೋ ಕಂಪನಿಯ ಪ್ರಾರಂಭ ಮತ್ತು ಆನೇಕಲ್ ಬಳಿ ೫೨೫ ಕೋಟಿ ರೂ.ಗಳ ಬಂಡವಾಳದ ಭಾರೀ ವಾಣಿಜ್ಯ ವಾಹನ ತಯಾರಿಕೆ ಘಟಕ ವೋಲ್ವೋ ಸ್ಥಾಪನೆ.

ಇಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ ಕೈಗಾರಿಕೆಗಳ ಬೆಳವಣಿಗೆಗೆ ರಾಜ್ಯ ಸರ್ಕಾರದ ಆದ್ಯತೆ. ಮಾಹಿತಿ ತಂತ್ರಜ್ಞಾನ ಪಾರ್ಕಿನ ಆರಂಭ. ೨೦೦೦ ಕೋಟಿ ರೂ.ಗಳ ವಾರ್ಷಿಕ ವಹಿವಾಟು. ೩೨೦೦ ಕೋಟಿ ರೂ. ಬಂಡವಾಳದ ಜಂಟಿ ವಲಯದ ಜಿಂದಾಲ್ ವಿಜಯನಗರ ಉಕ್ಕು ಕಾರ್ಖಾನೆ, ಬಳ್ಳಾರಿ ಜಿಲ್ಲೆಯಲ್ಲಿ ಮೂಲ ಸೌಕರ್ಯ ಅಭಿವೃದ್ಧಿ ಸಂಸ್ಥೆ : ಸರಕಾರ ಮೊಟ್ಟಮೊದಲ ಬಾರಿಗೆ ಮೂಲ ಸೌಕರ್ಯಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಯೊಂದನ್ನು ಸ್ಥಾಪಿಸಿದೆ. ೧೯೭೨-೭೩ರವರೆಗೆ ರಾಜ್ಯದಲ್ಲಿ ೧,೩೪,೫೪೨ ಕಿ. ಮೀ. ಉದ್ದದ ರಸ್ತೆ ಜಾಲವಿದ್ದರೆ ೧೯೯೭-೯೮ರಲ್ಲಿ ೧,೩೯,೨೧೦ ಕಿ.ಮೀಗೆ ವಿಸ್ತರಣೆ. **ಸಿ ಬರ್ಡ್ ಪ್ರಾಜೆಕ್ಟ್ :** ೧೯೮೬ರಷ್ಟು ಪೂರ್ವದಲ್ಲಿಯೇ ಪ್ರಾರಂಭಿಸಿ ಕಳೆದ ೧೨ ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಕಾರವಾರ ಸೀ ಬರ್ಡ್ ಯೋಜನೆಗೆ ಮರುಜೀವ. ಇದು ರಾಜ್ಯದ ಹಣಕಾಸು ವ್ಯವಸ್ಥೆಯಲ್ಲಿನ ಹೆಚ್ಚಳಕ್ಕೆ ಸಹಾಯಕ. ಮಾನ್ಯ ಮುಖ್ಯಮಂತ್ರಿಯವರ ಕ್ರಿಯಾಶೀಲತೆಗೆ ಸಂದ ಜಯ. **ಸಾರಿಗೆ ಮತ್ತು ಸಂಪರ್ಕ:** ಸಾರಿಗೆ ಸಂಸ್ಥೆಯನ್ನು ಮೂರು ಸ್ವಾಯುತ್ತ ವಿಭಾಗಗಳನ್ನಾಗಿ ವಿಂಗಡಣೆ ಮತ್ತು ಹೊಸದಾಗಿ ೪೦೦೦ ಬಸ್ಸುಗಳ ಖರೀದಿ. ರಾಜ್ಯದಲ್ಲಿ ಗ್ರಾಮೀಣ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಸರ್ಕಾರ ದೇಶದಲ್ಲೇ ಮೊಟ್ಟಮೊದಲ ಬಾರಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೊಳಿಸಿ ಅಧಿಕಾರ ವಿಕೇಂದ್ರಿಕರಣ. ಆಡಳಿತವನ್ನು ಜನರಿಗೆ ಮತ್ತಷ್ಟು ಸಮೀಪಕ್ಕೊಯ್ಯಲು ೭ ಹೊಸ ಜಿಲ್ಲೆಗಳ ಆರಂಭ. ರಾಜ್ಯದ ತೀರ ಹಿಂದುಳಿದ ಗ್ರಾಮಗಳನ್ನು ಮಾದರಿ ಗ್ರಾಮಗಳಾಗಿ ಅಭಿವೃದ್ಧಿಪಡಿಸಲು ಸ್ವಸ್ತಿ ಗ್ರಾಮ ಯೋಜನೆ. ಮುಂದಿನ ಎರಡು ವರ್ಷಗಳಲ್ಲಿ ರಾಜ್ಯದ ಎಲ್ಲಾ ಹಳ್ಳಿಗಳಿಗೆ ೯೦೦ ಕೋಟಿ. ರೂ. ವೆಚ್ಚದಲ್ಲಿ ಕುಡಿಯುವ ನೀರು ಪೂರೈಕೆ. ಆದ್ಯ ವಲಯಗಳಿಗೆ ಒತ್ತು ಕೊಟ್ಟು ಗ್ರಾಮೀಣ ನೀರು ಸರಬರಾಜು, ವಸತಿ, ಶಿಕ್ಷಣ, ಆರೋಗ್ಯ, ರಸ್ತೆ ಇತ್ಯಾದಿ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವತ್ತ ಸರ್ಕಾರದ ದೃಢ ಸಂಕಲ್ಪ, ಜನತೆ ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ಪ್ರಗತಿಯ ಫಲ ಸವಿಯುವಂತಾದಾಗಲೇ ನಮ್ಮ ಸ್ವಾತಂತ್ರ್ಯೋತ್ಸವ ಅರ್ಥಪೂರ್ಣ.

ಸುಂದರ ಕನಸಿನ ಪ್ರೇರಣೆ. ಮಹತ್ತರ ಸಾಧನಗೆ ಸಮರ್ಪಣೆ.

ಕರ್ನಾಟಕ ವಾರ್ತೆ



ಜಾಹಿರಾತು

***Printed at : Geetanjali Printers, Bangalore-54***

